# ಮೊದಲ ಹೆಜ್ಜೆ



ಶ್ರೀ ಮಹಾಂತೇಶ್ವರ ಜ್ಞಾನೋದಯ ಸಂಘ
ವಿದ್ಯಾಜ್ಯೋತಿ ಪೀಠ ಪ್ರಕಾಶನದ ಆರನೆಯ ಕುಸುಮ

# ಮೊದಲ ಹೆಜ್ಜೆ

— ಲೇಖಕರು —

ಕು|| ಶಿವರಾಯಮ್ಮಾ ಮಹಾಂತಪೂರ
ಚಿನ್ಮಯಗಿರಿ–ಚೌಡಾಪೂರ



ಮೊದಲನೆ ಆವೃತ್ತಿ : ೧೯೭೯
೧೦೦೦ ಪ್ರತಿಗಳು





ಬೆಲೆ - ೧-೫೦

ಮುಖ ಚಿತ್ರ
ಪ್ರೊ|| ಶ್ರೀ ಜಿ. ಎಸ್. ಖಂಡೇರಾವ
ಶರಣಬಸವೇಶ್ವರ ಕಲಾ ಮಹಾವಿದ್ಯಾಲಯ, ಕಲಬುರ್ಗಿ.

ಪ್ರಕಾಶಕರು
ಶ್ರೀ ಮಹಾಂತೇಶ್ವರ ಜ್ಞಾನೋದಯ ಸಂಘ
ವಿದ್ಯಾಜ್ಯೋತಿ ಪೀಠ ಮಹಾಂತಪೂರ.
ಅಂಚೆ :- ಚಿನ್ಮಯಗಿರಿ ತಾ. ಅಫಜಲಪೂರ
ಜಿ|| ಕಲಬುರ್ಗಿ (ಕರ್ನಾಟಕ)

ಮುದ್ರಕರು
ಎಮ್. ಸಿ. ಹಿರೇಮಠ
ಶ್ರೀ ವಿರೂಪಾಕ್ಷೇಶ್ವರ ಮುದ್ರಣಾಲಯ, ಆಳಂದ.
ಜಿ ಗುಲಬರ್ಗಾ (ಕರ್ನಾಟಕ)

## – ಅರ್ಪಣೆ –





**"ತಪೋರತ್ನ" ಶ್ರೀ ಷ. ಬ್ರ. ಯೋಗಿರಾಜೇಂದ್ರ**
**ಶಿವಾಚಾರ್ಯ ಮಹಾಸ್ವಾಮಿಗಳು ಬೃಹನ್ಮಠ ಹೊಟಗಿ**
**ಅವರ ಪವಿತ್ರ ಜಲದಂಘ್ರಿಗಳಿಗೆ**
**ಭಕ್ತಿಯಿಂದ ಮಣಿದು**
**– ಅರ್ಪಿಸುವೆ –**

**ಗುರು ಚರಣಾರಾಧಕ,**
**ಕು|| ಶಿವರಾಯ ಮಹಾಂತಪೂರ, ಚಿನ್ಮಯಗಿರಿ ಗುಡ್ಡ.**



ಶ್ರೀ ಗುರು ರೇಣುಕಂ ವಂದೇ

ಸದ್ಯೋಜಾತ ಮುಖೋದ್ಭೂತಂ ।
ಸದ್ಯೋವೈಭವದಾಯಕಂ ॥
ಸಿದ್ಧಿದಂ ಸಿದ್ಧ ವೃಂದಶ್ಚ ।
ವಂದೇ ಶ್ರೀ ರೇಣುಕಂ ಗುರು ॥

## = ಆಶೀರ್ವಚನ -

ಶ್ರೀ ಗುರು ಮಹಾಂತೇಶ್ವರ ಆಧ್ಯಾತ್ಮ ಹಂದರದ ನೆರಳಿನಲ್ಲಿ ಬಾಳಿ ಒದಕುತ್ತಿರುವ, ಪಾರಮಾರ್ಥ ಪಥದಲ್ಲಿ ಪಥಿಕನಾದ ಶ್ರೀ ಶಿವರಾಯ ಮಹಾಂತಪೂರ ಇವರು ಅನೇಕ ಧರ್ಮ ಗ್ರಂಥಗಳ ಅನುಸಂಧಾನದಿಂದ ಜ್ಞಾನಾಮೃತವನ್ನು ಪಡೆದು, ತನ್ನ ಅಂತರಂಗದ ಆಳಕ್ಕೆ ಇಳಿಸಿ, ಮಥಿಸಿ, ಶೋಧಿಸಿದಾಗ ಆ ಅಂತರಾಳದಿಂದ ಕಾರಂಜಿಯಾಗಿ ಸಿಡಿದೆದ್ದು ಬಂದ ಶಬ್ದ ಸಮೂಹವೇ, ಕವನಗಳಾಗಿ "ಮೊದಲ ಹೆಜ್ಜೆ" ಎಂಬ ಗ್ರಂಥದ ಪುಟಗಳಾಗಿವೆ

ಶ್ರೀ ಮಹಾಂತೇಶನ ಮಂಗಲಾಶೀರ್ವಾದ ಪಡೆದು ತನ್ನ ಅಸ್ಖಲಿತ ವಾಕ ಸರಣಿಯಿಂದ ಜನಮನಕೆ ದಿಗ್‌ಭ್ರಮೆಗೊಳಿಸುವಂಥ ಶಿವಾನುಭವ ಸಂಕೀರ್ತನೆಯಿಂದ "ವಾಣಿವೀರ" "ಪ್ರವಚನ ಪಟು" "ಗುರುಭಕ್ತಿಚಂದ್ರ" ಎಂಬ ಪ್ರಶಸ್ತಿ ಪಡೆದು, ಪ್ರಗತಿ ಪಥದಲ್ಲಿ ದಿಟ್ಟ ಹೆಜ್ಜೆಯನ್ನಿಡುತ್ತಿದ್ದಾರೆ.

ಶ್ರೀ ಮಹಾಂತೇಶನ ನಾಮವು ಸದಾ ಕೊಂಡಾಡುತ್ತಾ ಸಾಹಿತ್ಯ ಲೋಕಕೆ ಸಾವಿರ ಗ್ರಂಥಗಳು ಬರೆಯುವ ಶಕ್ತಿ ಪಡೆದು ಕನ್ನಡಮ್ಮನ ಗುಡಿಯೊಳಗೆ ಶೋಳಗಿ ಬೆಳಗಲೆಂದು ಆಶಿಸಿ, ಅಂತಹ ಶಕ್ತಿಯನ್ನು ಶ್ರೀ ಜಗದಾಚಾರ್ಯರು ಕರುಣಿಸಲೆಂದು, ಶ್ರೀ ಶಾರದೆ ನಾಲಿಗೆ ಕೊನೆ ಅಂಚಿನಲ್ಲಿ ಸಂಚರಿಸಿ ನರ್ತಿಸಲೆಂದು ಆಶೀರ್ವದಿಸುವೆ.

● ಸತ್ಯಂ ಶಿವಂ ಸುಂದರಂ ●

|| ಶ್ರೀ ಜಗದ್ಗುರು ರೇಣುಕಾಚಾರ್ಯ ಪ್ರಸನ್ನ ||



## – ಹಾರೈಕೆ –

ಶ್ರೀ ಮದ್ವೀರಶೈವ ಧರ್ಮ ಸಂಸ್ಥಾಪನಾಚಾರ್ಯರಾದ ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರನ್ನು ಯನ್ನ ಹೃನ್ಮಂದಿರದಲ್ಲಿ ಪ್ರಾರ್ಥಿಸಿ, ವೀರಶೈವ ಧರ್ಮ ಜ್ಯೋತಿ, ಶ್ರೀ ದೇವರ ದಾಸಿಮಯ್ಯ, ಬಸವಾದಿ ಶರಣರನ್ನು ಸ್ಮರಿಸಿ, ಶ್ರೀ ಮಂಗಲ ಮಹಾಂತೇಶನನ್ನು ಮನದೊಳ್ ನೆನೆದು ಸಾಹಿತ್ಯ ರಂಗದಲ್ಲಿ " ಮೊದಲ ಹೆಜ್ಜೆ " ಯನ್ನಿಡುತ್ತಿರುವ ಶ್ರೀ ಶಿವರಾಯ ಮಹಾಂತಪೂರ ಇವರ ಮೊದಲ ಹೆಜ್ಜೆಯಲ್ಲಿ ಚಿತ್ರಿತವಾದ ಚೆನ್ನುಡಿಗಳ ಸವಿಯನುಂಡು ಮನದುಂಬಿ ಹಾರೈಸುವೆ.

ಶ್ರೀ ಚಿನ್ಮಯಗಿರಿ ಮಹಾಂತೇಶ್ವರ ಧರ್ಮ ಪ್ರಸಾರ ಸಂಘದ ಸಾಧಕರಾದ ಶ್ರೀ ಶಿವಪುತ್ರಪ್ಪ ಮಹಾಂತಪೂರ, ಶ್ರೀ ಬಾಲಶಿವಶರಣ ಮೀನಾಕ್ಷಿ ಮಹಾಂತಪೂರ ಶ್ರೀ ಶಿವರಾಯ ಮಹಾಂತಪೂರ ಶ್ರೀ ಕಲ್ಯಾಣಕುಮಾರ ಇವರೆಲ್ಲರು ನಮ್ಮ ನಾಡಿನ ಹಳ್ಳಿಗಳ ಜನತೆಯ ಮನಗೆದ್ದು, ಅವರ ಹೃದಯ ಭೂಮಿಕೆಯಲ್ಲಿ ಧರ್ಮ ಬೀಜವನ್ನು ಬಿತ್ತಿ ಸುಜ್ಞಾನ ಜಲವನ್ನೆರೆದು, ಸದ್ಭಕ್ತಿ ಗೊಬ್ಬರವನ್ನಿಕ್ಕಿ, ಅಜ್ಞಾನ ಕಳೆಯನು ಕಳೆದು ಮೋಕ್ಷ ಫಲವೆಂಬ ಬೆಳೆಯು ಪ್ರಾಪ್ತವಾಗುವ ಮಾರ್ಗವನ್ನು ಶಿವಾನುಭವ ವಾಣಿಯಿಂದ ಬಿತ್ತರಿಸುತ್ತಿರುವರು.

ಶ್ರೀ ಕಾಯಕಯೋಗಿ ಷ. ಬ್ರ. ಸಿದ್ಧರಾಮ ಶಿವಾಚಾರ್ಯರ ಕೃಪಾ ಕ್ಷೇತ್ರದಲ್ಲಿ ಅವರ ಕರುಣ ಪ್ರಸಾದ ಸವಿದು, ಸಾಹಿತ್ಯ ಲೋಕದಲ್ಲಿ ಮುನ್ನಡೆಯುತ್ತಿರುವ ಶ್ರೀ ಶಿವರಾಯ ಮಹಾಂತಪೂರ ಇವರ " ಮೊದಲ ಹೆಜ್ಜೆ " ನಾಂದಿಯಾಗಿ ನಿಂತಿದೆ. ಮುಂದೆ ಹಲವು ಕೃತಿಗಳೊಡನೆ ಮಂಗಲಗೊಳ್ಳಲೆಂದು ಹಾರೈಸುವೆ.

ತಮ್ಮ ಮಹಾಂತ ಬಳಗದ,

ಮಕರ ಸಂಕ್ರಮಣ
೧೪–೧–೧೯೭೪

ಶ್ರೀ ಶಿವಶರಣಪ್ಪ ಹಳ್ಳಿ
ಸರಸಂಬಾ, ತಾ ಆಳಂದ

# ಮುಮ್ಮಾತು

ಪಂಚಾಕ್ಷರವದನೋದ್ಭೂತಾನ್ | ಪಂಚತತ್ವಾಧಿನಾಯಕಾನ್ ||
ಪಂಚಬ್ರಹ್ಮಮಯಾನ್ನೌಮಿ | ಪಂಚಾಚಾರ್ಯಾನ್ ಜಗದ್ಗುರೂನ್ ||

ಸ್ಮರಿಸಿದೆ ಗುರುವರ್ಯರನ್ನ. ಆದರೆ ಇದೇನು ಮಾಡುತ್ತಿರುವೆ? ಮುಮ್ಮಾತು ಬರೆಯುತ್ತಿರುವ ಅಂಥಹ ಶಕ್ತಿ ನನ್ನಲ್ಲಿದೆಯೇ? ಇಲ್ಲ, ಅದ್ದರಿಂದಲೇ ಆ ಶಕ್ತಿ ನೀಡಲು ಗುರುವರನಡಿಗೆ ಮೊರೆ ಹೊಕ್ಕಿದ್ದೆ.

ಸನ್ಮಾನ್ಯ ಮಿತ್ರರಾದ ಶ್ರೀ ಶಿವರಾಯ ಮಹಾಂತಪೂರ ಅವರು ಪ್ರಥಮ ದಲ್ಲಿ ತಮ್ಮ "ಮೊದಲ ಹೆಜ್ಜೆ" ಕವನ ಸಂಕಲನ ತಂದು ಅಲ್ಪ ಸ್ವಲ್ಪ ಓರೆ ಕೋರೆ ತಿದ್ದುವಂತೆ ಕೇಳಿದಾಗಲೂ ನನಗೆ ಎದುರಾದ ಪ್ರಶ್ನೆ ಅದೆ. ಆದರೂ ಏನೋ ಮಿತ್ರರ ವಾತ್ಸಾಯಕ್ಕೆ ಮಣಿದು ತರುಣ ಕವಿಗಳಾದ ಈಶ್ವರ ಹತ್ತಿಯವರ ಸೂಹಿ ಯಂತೆ ಈ ಮುಮ್ಮಾತು ಬರೆಯುತ್ತಿದ್ದೇನೆ.

ಶ್ರೀ ಶಿವರಾಯಾ ಮಹಾಂತಪೂರ ಅವರ ಈ "ಮೊದಲ ಹೆಜ್ಜೆ" ಯಿಂದಲೇ ಸಾಹಿತ್ಯ ರಂಗವಲ್ಲಿ ತಮ್ಮ ಮೊದಲ ಹೆಜ್ಜೆಯನ್ನಿಡುತ್ತಿದ್ದಾರೆ ಅವರ ಹೆಜ್ಜೆ ಒಂದು ಕಾಲಕ್ಕೆ ಖಂಡಿತವಾಗಿಯು ಪ್ರೌಢ ಹೆಜ್ಜೆಯಾಗಿ ಅವರದೇ ಆದ ಒಂದು ಪಥ ಸಾಹಿತ್ಯದಲ್ಲಿ ಕೊಡುತ್ತದೆಂಬ ಭರವಸೆ ನನಗಿದೆ.

"ಮೊದಲ ಹೆಜ್ಜೆ" ಯ ಪುಟಗಳನ್ನು ತಿರುವಿ ನೋಡಿದಾಗ ಅದರಲ್ಲಿಯ ಕವನಗಳು ಹಳೆತು ಹೊಸತವುಗಳಿಂದ ಕೂಡಿಷುಗಳೆಂಬ ಕಲ್ಪನೆ ನಮಗೆ ಬರುತ್ತದೆ. ಆದಕ್ಕೂ ಮಿಗಿಲಾಗಿ ಕವನಗಳು ಇನ್ನೂ ಬೆಳವಣಿಗೆಯ ಹಂತದಲ್ಲಿವೆ ಎಂಬುದನ್ನು ತೋರಿಸಿ ಕೊಡುತ್ತಿವೆ. ಇರಲಿ, ಬೆಳೆಯಲಿ, ಹುಲಸಾಗಿ ಅಭಿವೃದ್ಧಿಯಾಗಲಿ, "ಮೊದಲ ಹೆಜ್ಜೆಯಿಂದಲೇ ಮಹಾನ್ ಆದರ್ಶದ ಹೆಜ್ಜೆ ಮುಟ್ಟಲಿ" ಎಂದು ಹಾರೈಸಬೇಕೆನಿಸುತ್ತದೆ ನನ್ನ ಮನಸ್ಸು.

ಕೊನೆಯದಾಗಿ ನನ್ನ ಬೇಡಿಕೆ ಇಷ್ಟೇ ಇಂಥ ತರುಣ ಕವಿಗಳು ಹೆಚ್ಚಾಗಿ ಬೆಳೆದು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಅಭಿವೃದ್ಧಿ ಹೊಂದಲೆಂದು ಆಶಿಸುವೆ.

ನಿಂಬರ್ಗಾ
೨೭-೧-೧೯೭೪

ಶಿ. ಮ. ಹಿರೇಮಠ ಎಂ. ಎ
( ಶ್ರೀ ಶರಣಬಸವೇಶ್ವರ ಸಂಸ್ಥಾನ )

# ನನ್ನ ನುಡಿ

ಸಹೃದಯಿಗಳಿಗೆ ಶರಣಾರ್ಥಿ. ಮಾನವನ ಜೀವನದಲ್ಲಿ ಸುಖ ದುಃಖ, ನೋವು ನಲಿವು ಕಟ್ಟಿಟ್ಟ ಬುತ್ತಿಗಳು. ಆಯಾ ಸ್ಥಿತಿ ಬಂದೊದಗಿದಾಗ ಅವನ ಅಂತರಾಳದಲ್ಲಿ ಅರಿವಾಗಿ ವಿಚಾರಗಳು ಅಲೆದು ಬರುತ್ತವೆ. ಆಯಾ ವಿಚಾರದಂತೆ ಒಂದ ಹಾಗ ತನ್ನ ಜೀವನದ ಎಣಿಕೆಯನ್ನು ಮಾಡಲು ಪ್ರಾರಂಭಿಸುತ್ತಾನೆ. ಆ ಎಣಿಕೆ ಮಾಡಿ ನಿರ್ಧಾರಕ್ಕೆ ಬಂದಂತೆ ತನ್ನ ಜೀವನವನ್ನು ರೂಪಿಸಿಕೊಳ್ಳುತ್ತಾನೆ.

ಅಂತೆ ಇಲ್ಲಿಯೂ ಕೂಡಾ ನಾನು ವಿದ್ಯಾರ್ಥಿ ಜೀವನ ಸಾಗಿಸುತ್ತಿರುವಾಗ ಸಾಕಷ್ಟು ತೊಂದರೆಗಳನ್ನು ಅನುಭವಿಸಬೇಕಾಯಿತು. S. S. L. C. ಪಾಸಾದ ನಂತರ ಕಾಲೇಜ ಕಟ್ಟಿ ಏರುವದು ಕನಸಿನ ಕಥೆಯಾಗಿತ್ತು. ಆ ಕನಸನ್ನು ನನಸು ಮಾಡಿಸಿ ಹೆಚ್ಚಿನ ಜ್ಞಾನ ಸಂಪಾದಿಸಲು ಪ್ರೋತ್ಸಾಹ ಶಕ್ತಿಯನ್ನೊದಗಿಸಿದ ಚಿನ್ಮಯಗಿರಿ ಶ್ರೀ ಮಹಾಂತೇಶ್ವರ ಗುಡ್ಡದ ಮಹಾಸ್ವಾಮಿಗಳವರ ಪ್ರಯತ್ನವೇ ಅದಕ್ಕೆ ಮೂಲ ಕಾರಣವಾಗಿದೆ. ನನ್ನ ಶೈಕ್ಷಣಿಕ ಜೀವನದತ್ತ ಆರ್ಥಿಕ ನೆರವು ನೀಡಿದಲ್ಲದೆ ನನ್ನ ಜೀವನದ ಸುಖ ದುಃಖದಲ್ಲಿ ಪಾಲ್ಗೊಂಡು ನನ್ನ ಅಭಿವೃದ್ಧಿಗಾಗಿ ಶ್ರಮಿಸುತ್ತಿರುವ ನನ್ನ ಆರಾಧ್ಯ ಧರ್ಮ ಗುರುಗಳಾದ ಶ್ರೀ ಸಿದ್ಧರಾಮ ಶಿವಾಚಾರ್ಯ ಮಹಾಸ್ವಾಮಿಗಳವರ ಪಾದ ಪದ್ಮಂಗಳಿಗೆ ಪ್ರಪ್ರಥಮವಾಗಿ ವಂದಿಸುತ್ತೇನೆ.

ಹೀಗೆ ನನ್ನ ಕಾಲೇಜ ಜೀವನ ಸಾಗುತ್ತಿರುವಾಗ ನನಗಾದ ಆಧ್ಯಾತ್ಮಿಕ ಹಾಗೂ ಲೌಕಿಕ ವಿಚಾರಗಳು ನನ್ನ ಹೃದಯದಲ್ಲಿ ತಾಕಲಾಟವಾಡುತ್ತಿರುವಾಗ ಅವುಗಳ ನಿರ್ಣಯವನ್ನು ಕಾಣಲು ಆತುರತೆ ಹೆಚ್ಚಿತು. ಅಂತೆ ನನ್ನ ವಿಚಾರ ದೊಂದಿಗೆ ಕವನ ರಚಿಸಬೇಕೆಂದು ನಿರ್ಧರಿಸಿಕೊಂಡೆ.

ನಮ್ಮ ನಾಡಿನ ಕವಿಗಳು ರಚಿಸಿದ ಪದ್ಯಗಳನ್ನು ಆಳವಾಗಿ ಅರ್ಥೈಸಿ ವಿದ್ಯಾರ್ಥಿಗಳನ್ನು ಕುತೂಹಲಗೊಳಿಸುವಂತೆ ಹೇಳುತ್ತಿರುವ ಪ್ರೊ|| ಎಸ್. ಎಸ್. ಬಾಣದರವರ ರೋಮಾಂಚನಕಾರಕವಾದ ನುಡಿಗಳನ್ನು ಹಾಗೂ ಸಾಹಿತ್ಯಪೂರ್ಣವಾದ ಮಾತುಗಳನ್ನು ಹೇಳಿ ಎಚ್ಚರಿಸಿದ ಪ್ರೊ|| ಪ್ರಭುಲಿಂಗಯ್ಯಾ ಮಲ್ಲಾಪೂರ ಅವರ ಮಾತುಗಳನ್ನು ಕೇಳಿದ ನನಗೆ ಹೊಸದಾದ ವಿಚಾರಗಳನ್ನು ಮೂಡಿದವು. ಅವರಿಗೆ ನನ್ನ ನಮನಗಳನ್ನು ಅರ್ಪಿಸದೆ ಇರಲಾರೆ

ನನ್ನ ವಿದ್ಯಾರ್ಥಿ ಜೀವನಕ್ಕೆ ಮಿತ್ರರಾಗಿಯೇ ನಡೆ ನುಡಿಗಳನ್ನು ತಿದ್ದಲು ಗುರುಗಳಾಗಿಯೇ ದೊರೆತ ಎಸ್. ಎಮ್. ಹಿರೇಮಠರು ನನ್ನ ಕವನಗಳನ್ನೆಲ್ಲಾ ತಿದ್ದಿ ಹೊಸ ರೂಪ ಕೊಟ್ಟಿದ್ದಾರೆ ಅವರಿಗೂ ಕೂಡಾ ನನ್ನ ಧನ್ಯವಾದಗಳನ್ನು ಅರ್ಪಿಸುತ್ತೇನೆ. ಈ ಪುಸ್ತ ಹೊರತರುವದಕ್ಕೆ ಧನ ಸಹಾಯಾರ್ಥವಾಗಿ ಸಾರ್ವಜನಿಕ ಗಣೇಶೋತ್ಸವ ಸಮಾರಂಭ ಪಟ್ಟಣ ಗ್ರಾಮದ ಸಾಹಿತ್ಯ ಅಭಿಮಾನಿಗಳೆಲ್ಲರೂ ಕೂಡಿ ೧೫೦ ರೂಪಾಯಿಗಳನ್ನು ಹಾಗೂ ಸಾರ್ವಜನಿಕ ಗಣೇಶೋತ್ಸವ ಸಮಾರಂಭ ರುದ್ರವಾಡಿ ಗ್ರಾಮದ ಸಾಹಿತ್ಯ ಅಭಿಮಾನಿಗಳೆಲ್ಲರು ಕೂಡಿ ೨೫೦ ರೂ. ಕೊಟ್ಟರು ಅವರಿಗೂ ಕೂಡಾ ಧನ್ಯವಾದಗಳನ್ನು ಅರ್ಪಿಸುವೆ.

ಇದಕ್ಕೆ ಮುನ್ನುಡಿ ಬರೆದ ಹಿರೇಮಠರವರಿಗೂ, ಹಾರೈಕೆ ಬರೆದ ಶ್ರೀ ಶಿವಶರಣಪ್ಪ ಹಳ್ಳಿ ಸರಸಂಬಾ ಇವರಿಗೆ, ಅಲ್ಲದೇ ಅಂದವಾದ ಮುಖಚಿತ್ರ ತೆಗೆದು ಕೊಟ್ಟ ಪ್ರೊ|| ಖಂಡೇರಾವ ಸರ್ ರವರಿಗೂ ಹಾಗೂ ಅಷ್ಟೇ ಅಂದವಾಗಿ ಮುದ್ರಿಸಿ ಕೊಟ್ಟ ವಿರೂಪಾಕ್ಷೇಶ್ವರ ಮುದ್ರಣಾಲಯದವರಿಗೂ ಧನ್ಯವಾದಗಳನ್ನರ್ಪಿಸುತ್ತೇನೆ ಮುಖ ಚಿತ್ರದ ಬ್ಲಾಕಿಗೆ ಹಣ ಸಹಾಯ ಮಾಡಿದ ಕಮರವಾಡಿ ಸದ್ಭಕ್ತರಿಗೂ ವಂದನೆಗಳು. ಕೊನೆಗೆ ಸಾಕಷ್ಟು ಜ್ಞಾನ ಸಂಪಾದಿಸಲು ಸಶಕ್ತವಾಗಿ ಜ್ಞಾನ ಭಾಂಡಾರವೇ ತುಂಬಿಕೊಂಡು ನಿಂತಿರುವ ಶರಣಬಸವೇಶ್ವರ ಗ್ರಂಥ ವಿಶ್ವ ವಿದ್ಯಾನಿಲಯ ನನಗೆ ಜ್ಞಾನ ಒದಗಿಸಿ ಕೊಡುತ್ತಿರುವದು ಸಾಮಾನ್ಯ ರೀತಿಯಿಂದಲ್ಲ ಅದು ನನ್ನ ಪಾಲಿಗೆ ತಾಯಿಯಾಗಿದೆ. ಅದರ ಪರಿಣಾಮವಾಗಿ " ಓ ಎನ್ನ ಮಾತೆ " ಎಂದು ಕವನ ಬರೆದಿದ್ದೇನೆ ಇನ್ನೂ ಋಣ ತೀರಲಿಲ್ಲವೆಂದು ಭಾವಿಸಿ ಅದಕ್ಕೂ ಅದರ ಸ್ಥಾಪನೆಯ ಕಾರಣಕರ್ತರಿಗೂ ಹಾಗೂ ಅದನ್ನು ನಡೆಯಿಸಿಕೊಂಡು ಹೋಗುವವರಿಗೂ ಧನ್ಯವಾದಗಳನ್ನು ಅರ್ಪಿಸುತ್ತೇನೆ.

— ಲೇಖಕ —

ಕು|| ಶಿವರಾಯ ಮಹಾಂತಪೂರ

## ಸಲುಹೈ ಗುರುದೇವ

ನೀನು ಎನ್ನನು ಸಲುಹೈ ಗುರುದೇವ ನಿನ್ನ
ರಕ್ಷಕವಚವನಿಕ್ಕಿ
ದಯಪಾಲಿಸದಿದ್ದಲಿ ಸಾಯುವಂತಿಲ್ಲ ಬದಕುವಂತಿಲ್ಲ
ಜೀವವಿದ್ದೂ ಸತ್ತಂತೆ
ಒಂದಡೆ ಮೋಕ್ಷ ಕೈ ಮಾಡಿ ಕರೆಯುತಿದೆ/ಇನ್ನೊಂದಡೆ
ಮಾಯೆ – ಕೈ ಹಿಡಿದು ಜಗ್ಗುತಿದೆ
ಇಕ್ಕುಳ ಬಾಯಲಿ ಸಿಕ್ಕಂತಾಗಿದೆ ನನ್ನ ನೀಗ
ಅರ್ಥವಾಗುತ್ತಿಲ್ಲವೇನನ್ನು
ಸೌಂದರ್ಯಕ್ಕೆ ಸೋಲಲೊ ಮೋಕ್ಷಕ್ಕೆ ಬಾಗಲೊ
ತಿಳಿಸ್ಕೊಡುವೇನೆಂದು
ಮಾಯಗೆ ಬಲಿಯಾದರೆ ಕೇಡು, ಮೋಕ್ಷಕ್ಕೆ ಪಾಡು
ಏನು ಮಾಡಲಿ ಹೇಳು
ಕತ್ತಲೆಯಲಿದ್ದ ನನ್ನ ನೀಗ ಕೈ ಹಿಡಿದು ನೀನಡೆಸು
ಮೆದಲು ದಾರಿ ತೋರಿಸು
ನಿನ್ನ ನಂಬಿದ ನಾನಿನ್ನಾರನ್ನು ನಂಬಿಲ್ಲ ಗುರುದೇವಾ
ನೀ ದೂರಾದರೆ ?
ಹಡೆದ ತಂದೆ ತಾಯಿ ಇವನಲ್ಲ ನಮ್ಮ ಮಗನೆಂದು ಹೇಳಿದರೆ
ಬದುಕ ಬೇಕವನೆಲ್ಲಿ ?
ಇಂತು ಪರಿಯೆ ನನ್ನ ಜೀವನ ಮಣ್ಣು ಗಾಣುತಿದೆ
ಸಿಕ್ಕದಕ್ಕೆ ಕೊಚ್ಚಿಕೊಂಡ್ಹೋಗುತ್ತಿದೆ,
ನೀನು ಎನ್ನನು ಸಲುಹೈ ಗುರುದೇವ ನಿನ್ನ
ರಕ್ಷಕವಚವನಿಕ್ಕಿ

## -: ಮಂಗಲ ತರಂಗ :-

ಮೂಡುತಿಹನು ನೋಡಲ್ಲಿ
ಮಂಗಲದಾ ಮೂರುತಿ
ಮೂಡಣದಲಿ ಬೆಳಕು ಚೆಲ್ಲಿ.
ತೋರುತಿಹನು ಕೀರುತಿ.

ಜಗದ ಕತ್ತಲು ದೂರ ಮಾಡಲು
ಅದರ ಸ್ಥಾನಕೆ ಬೆಳಕುನಿಲಿಸಲು.
ದುಡಿಯುತಿರುವನು ನಿರಂತರ
ಅವನ ಪ್ರೀತಿ ಒಂದೇ ತರ.

ಬಡವ ಬಲ್ಲಿದ ಭೇದವಿಲ್ಲ,
ತಿರುಕ–ರಾಜ ಒಂದೆ ಎಲ್ಲ.
ಮನೆಯೆ ಮಸಣವೊ ಗುಡಿಯೊ ಗುಡಿಸಲೊ
ಸಮತೆ ಯೊಂದೇ ನೆಲ ಜಲ

ಒಂದೆ ನೀರು ಒಂದೆ ಗಾಳಿಯು.
ಬೆಳಕು ಕೊಡುವನೊಬ್ಬನೇ.
ಜಗದ ಇಷ್ಟವು ಸಿದ್ಧಿಸುತ್ತಿದೆ.
ಮೂಡಿ ಬರುತಿಹ ರವಿಯಲೆ,

ಅವನ ಬಡಿತಕೆ ಜಡವು ಚೇತನ,
ದಿವ್ಯ ಶಾಂತಿಯ ಪ್ರಸರಣ
ಮಂಜು ಹನಿಯು ಬೆಳಗುತಿರುವದು.
ಜಗದ ಬಾಳಿಗೆ ಮಂಗಲ

## – ಓ... ನನ್ನ ಗುರುರಾಯ –

ಓ... ನನ್ನ ಗುರುರಾಯ.
ಭಕ್ತರ ಕಲ್ಪತರು ನೀನಯ್ಯಾ.
ಇಷ್ಟ ಸಿದ್ಧಿಸುವ ಕಾಮಧೇನುವಯ್ಯಾ.
ಸಕಲ ಸುಖ ನಿತ್ಯಾನಂದ ನೀನಯ್ಯಾ

ಚಿತ್ ಶಕ್ತಿಯಲ್ಲಿಡಗಿಹುದು ಮಹಾಶಕ್ತಿ
ಸತ್ ಕರ್ಮದಲ್ಲಿಡಗಿಹುದು ಮಹಾಮುಕ್ತಿ
ನಿತ್ಯ ಪರಿಪೂರ್ಣನಾಗಿರುವಿ ಸತ್ಯ
ಭವ ಮಿಥ್ಯ ಹರಿದೊಡಾ ಅರಿವದು ಸತ್ಯ.

ನಿಷ್ಠಾವಂತ ಭಕ್ತರ ಬಯಕೆ ಪೂರೈಸುವಿ.
ಇಚ್ಛೆಯನ್ನರಿತು ಅವರ ಕ್ಷೇಮ ವಹಿಸುವಿ
ಸ್ವಚ್ಛ ಮನಸ್ಸಿನಿಂದ ಭಕ್ತರ ಶುಚಿ ಗೊಳಿಸುವಿ
ಅಚ್ಚಳಿಯ ಮಾತು ಉಚ್ಛರಿಸಿ ಬಿಡುವಿ.

ನಿನ್ನಿಂದ ಜಗವೋದ್ಧಾರ ಜನವೋದ್ಧಾರ.
ನಿನ್ನಿಂದ ಜಗಪಾವನ ಜಲಪಾವನ.
ನಿನ್ನ ಪಾದ ಕಂಡವನ ಭವ ಬಂದನ ವಿಮುಕ್ತ
ಪರಮ ಪಾವನ ಸುಖವದು ಪ್ರಾಪ್ತ.

ಶಿಲದಾಕೃತಿಯಲಿ ಭೌತಿಕ ರೂಪ ರಂಜಿಸಿದರೂ
ನಿನ್ನೊಳಡಗಿದ ಘನತೆ ಮಿತಿ ಮೇರೆ ಉಂಟೆ ?
ನೋಡಿ ದೊಡ್ಡ ಮಾನವ ರೂಪಿಯಂದೆ ನಿಸಿದರೂ
ಗಾಥ ಶಕ್ತಿಯ ವೊಕ್ತಿ ನಿನ್ನ ಸಮರುಂಟೆ ?

## – ನನ್ನ ಅರಗಿಣಿ –

ಓ ಮುದ್ದು ಅರಗಿಣಿಯೇ
ಮೌನವೇಕೆ ತಾಳಿರುವೇ,
ನೀನು ಏಕಾಂಗಿಯಾಗಿರುವೆಯಾ
ನನ್ನೊಡನೆ ಕೂಡು ಬಾSSS

ಗಿಡದಡಿಯಲಿ ಕರೆವ ನಾನು
ಗಿಡದಂತೆ ದೂರ ನೀನು.
ಕರೆದಾಗ ಓ ಎನ್ನಲಾರೆ ಕೇಳಿಸದೇನು ?
ನಿನ್ನ ಹೃದಯದಂತ ರಂಗದೋಳು ?

ಎಲ್ಲೆಲ್ಲೊ ಹಚ್ಚ ಹಸಿರು
ಎಲ್ಲೆಲ್ಲೊ ಬೆಳದಿಂಗಳ ಒಸರು
ನಾನು ನೀನು ಕೂಡೋಣ
ಪ್ರೇಮ ನಾಂದಿ ಹಾಡೋಣ

ಹೂವು ತಾನರಳಿ ನಿಂತಾಗ
ಭ್ರಮರಂಗೆ ಆಹ್ವಾನಿಸಬೇಕಿಲ್ಲ.
ತಾ ಬರುವಂತೆ ನಾ ಬರುವೆ.
ನಿನ್ನ ಕೂಡ ಜೋಡಿಯಾಗುವ.

ಸರಸ ಸಲ್ಲಾಪಗಳಾಡುವಲ್ಲಿ
ಹರುಷಾನಂದದಿಂದ ಕುಣಿವ ವೇಳೆಯಲಿ
ಮೌನ ವೇಕೆ ? ತಾಳಿರುವೆ (ಮಾತಾಡ )
ಓ ನನ್ನ ಮುದ್ದು ಅರಗಿಣಿಯೇ

## - ಶರೆ -

ವಾ ಹರೇಮುಗನೇ !
ನೀನು ಸುದೈವಿ,
ನಿನ್ನಿಂದ ಉದ್ಧಾರಾದವರು
ಅನ್ನೋದಕ್ಕಿಂತ
ಹಾಳಾದವರೆ, ಬಹಳ
ಜ್ಯೋಡಿ ಮಾತು ನಾನೆ ಅಂತೀನಿ
ನನಗ ನೀ ಕೇಡ ಮಾಡಾಕ ಬರಬೇಡ.
ನಮ್ಮ ಅಜ್ಜ ನಿನಗ
ಹೊಡೆದು ಹೊರಗ
ಹಾಕೋದರಲ್ಲಿ ತನ್ನ ಬಡಿಗೀನ್ನೇ,
ಮುರಿದ್ಕೊಂಡ,
ಕೆಲವರಿಂದ ಖೋಡಿ ಅನಿಸ್ಕೊಂಡ,
ಹಲವರಿಂದ ಪಾಡ್ ಅನಿಸ್ಕೊಂಡ
ಇವನ ಸ್ಥಾನಕ ಚಿಕ್ಕಜ್ಜ ಬಂಡಾನ
ಇವನು ನಿನ್ನ ಕಾಲಾಗ
ಎನ್ ಮಾಡಕೊಂತಾನೋsss
ತಿಳಿಯದಾಗಿದೆ ದುಷ್ಟಾ
ಬೇಗ ನಮ್ಮನಿ ಬಿಟ್ಟು ಹೋಗೋsss
ನಿನಗೊಂದು ದೊಡ್ಡ ನಮಸ್ಕಾರ ಕೊಡ್ತಿನಿ.
ನಿನ್ನಿಂದ ನನ್ನಣ್ಣ ತಮ್ಮ ಎಲ್ರೂ ಕೆಟ್ರೋsss
ಕೊಳೆತು ಸತ್ತು ಹೋದ್ರು
ನೀ ಮಾಡೋದೊಡ್ಡ ಉಪಕಾರ

" ಕೃತಜ್ಞತೆ ಇಲ್ಲದ ಮಕ್ಕಳು ಹಾವಿನ ಹಲ್ಲಿಗಿಂತ ಘೋರ "

ನಮ್ಮನೆ ಹಾಳ್ ಮಾಡುವದೊಂದೆ
ನಿನಗೆ ನಮ್ಮನೆಯಲ್ಲಿ ಮೊದಲ್ ಸ್ಥಾನ ಕೊಟ್ಟಿದ್ದಿಲ್ಲ !!
ಆದ್ರ ಕಾಲ ಹಿಡಿದ್ರು ಬಿದ್ದು ಬೇಡ್ಕೊಂಡಿ.
ನಮ್ಮನೆ ಸೇರ್ಕೊಂಡಿ,
ಆಗ ಆಳಾಗಿದ್ದಿ,
ಈಗ ನಮ್ಮ ಅರಸಾಗಿ ಬಿಟ್ಟನಲಾ

" ಸುಂತರನ್ನು ಕಾಣಬೇಕೆಂದು ನಾನು ನಿರೀಕ್ಷಿಸುವದಿಲ್ಲ ಸಾಮಾನ್ಯ ಸಭ್ಯನನ್ನು ಕಂಡರೆ ಸಾಕು "

" ಬುದ್ಧಿವಂತ ಮಾತನಾಡುವ ಮೊದಲು ಯೋಚಿಸುವನು ದಡ್ಡ ಮೊದಲ ಮಾತನಾಡಿ ನಂತರ ಅದನ್ನು ಕುರಿತು ಯೋಚಿಸುತ್ತಾನೆ "

# – ದೇವತೆ –

ವಿಚಾರ ಮಾಡಿ ಮಾಡಿ ಸಾಕಾಯಿತು.
ಎನ್‌ನ್ನೊದೂ ತಿಳ್ಯಾಕಲ್ಡಾಗ್ಯಾದ.
ನೀನೇನು ವಿಶಿಷ್ಟ ಶಕ್ತಿಯೋ ?
ಆಕರ್ಷಣೆ ಬಲೆಯೋ ?
ಮೋಹದ ಜ್ವಾಲೆಯೋ ?
ವಿಶ್ವಾಮಿತ್ರನ ತಪಶ್ಯ.
ರಾವಣನ ರಾಜ್ಯೈಶ್ವರ್ಯ
ಕೀಚಕನ ದರ್ಪ
ಗಿರಿಜೇಶನ ವೃತ,
ನಾಶಗೊಂಡವು ಏತಕ್ಕಾಗಿ ?
ನಿನ್ನಲಡಗಿದ ಶಕ್ತಿಗಾಗಿ,
ಹೌದೀಗ ತಿಳಿಯಿತು.
ನೀನು ಸಾಕ್ಷಾತ ದೇವತೆ ಎಂದು
ನಿನ್ನೊಲಿಸಲು ಬರುವ
ಭಕ್ತರು ಬಹಳ
ನಿನಗಾಗಿ ದಂಡಿಸುವರು
ದುಡ್ಡು ದೇಹವೆರಡು
ಓ ದೇವತೆಯೇ .. ?
ನನಗೊಲಿದು ಬಾ ಎಂದು ಕರೆವಡು
ನೀನು ಜಾಣೆ, ಒಬ್ಬರ ನೊಲಿದು
ಇನ್ನೊಬ್ಬರ ಒಧೆ ಮಾಡುವಿ
ನಾರಿ ನೀ ಮುನಿದು ಮಾರಿ ಎನಿಸಿಕೊಂಡೆ
ನೀನೆನಗೆ ಮಾತೆ
ಇರುತಿಕಲರೂಪಗಳು ಈ ಧರೆಗೆ ಪೊರೆಯುತೆ

" ಪ್ರತಿಭಾ ಶಾಲಿ ನಾಶವಾಗುವದು ತನ್ನವರಿಂದಲೆ ಹೊರತು ಬೇರೆಯವರಿಂದಲ್ಲ "

## - ಮುಡಿದ ಹೂವಿಗೆ -

ಎನಿಹುದಾ
ಎನಿಸುದು
ಇದರಲ್ಲಿ
ನೋಡುವಿ ಯಾಕೆ ?
ಅಷ್ಟೊಂದು ಅಲ್ಲಿ.
ಸಾವಿರ ಕಣ್ಣುಗಳು
ನೆಕ್ಕಿವೇ...... !
ಸುವಾಸನೆಯಲ್ಲಾ
ಕುಕ್ಕಿವೆ........!
ವಿಚಾರಿಸು
ಹೌದ್ದು,
ಮನದಲ್ಲಿ
ಸಂತೋಷ ವಿಹುದೆಂದ್ದು,
ಭಾವಿಸಿದಿ ಅಲ್ಲಿ
ತಿಪ್ಪೆಯಲಿ ಬೀಳುವ
ಹಿಂಡಿದ ಹಿಪ್ಪಿಗೆ
ಬೆಪ್ಪಾಗ ಬೇಡ
ಮುಖಕ್ಕೆ ಕಪ್ಪ ಹಚ್ಚಿ
ಕೊಳ್ಳಬೇಡ .. !
ಮರುಳಾಗಿ ಮಂಕಾಗಿ
ಬೆಪ್ಪನಂತೆ,
ಬಿಸಿಲ್ಗುದರ್ರೆ,
ಎರದೆ ಬಳಲಿದಂತೆ
ಬಳಲ ಬೇಡ
ಸಾಯಬೇಡ.... !
ಕಷ್ಟಕಿಡಾಗಬೇಡ

## - ಹಂಬಲ -

ನಿನ್ನ ಸ್ಮರಣೆಯಲಿದ್ದೇನೀಗ
ನಿನಗದು ತಿಳಿಯದಾಗಿದಿಯೆ ?
ತಿಳಿಸ್ಕೊಡುತಿನಿ ತಿಳಿದುಕೊ
"..........." ತಿಳಿದು ಕೊಂತೆಯಾ ?
ಹಗಲಿರಳು ಚಿಂತಾ ಭ್ರಾಂತನಾಗಿದ್ದೇನೆ.
ನಿನ್ನನೇ ಸ್ಮರಿಸುತಿದ್ದೇನೆ.
ನಿನಗೆ ನನ್ನ ಪರಿವೆ ಇಲ್ಲವೆ ?
ಹಾಗೆ ಮಾಡದಿರು
ತೋರಿಸು ನಿನ್ನ ದರ್ಶನವಾ
ಹಸಿದ ಪಶುವಿಗೆ ಹಸಿರು ತೋರಿರೆದಂತೆ
ನನ್ನ ಸ್ಥಿತಿ ಯಾಗಿದೆ
ಹಲವು ಆಶೆ ಇಟ್ಟ ಕೊಂಡಿದೇನು.
ರುಜೆಯುಡಿಸಿ ಬಿದ್ದಿದ್ದೇನೆ.
ನಿನ್ನ ಭಾವ ಚಿತ್ರದಲಿ
ಸಾಯುವ ಈ ಸಮಯಕ್ಕಾದರೂ
ಪ್ರಕಟ ಆಗು ದೇವಿ
ಬದುಕುತ್ತೇನೆ....!

ಮನುಷ್ಯರ ಮನಸ್ಸನ್ನು ಸುಟ್ಟು ಹಾಕುವ ಜ್ವಾಲೆ, ಪ್ರೇಮ.

## ತ....ಥ್ ನಿನ್ನ ಜನ್ಮಕ್ಕ ಬೆಂಕಿ ಹಚ್ಚಲಿ

ತ....ಥ್ ನಿನ್ನ ಜನ್ಮಕ್ಕ ಬೆಂಕಿ ಹಚ್ಚಲಿ
ನಿನ್ನ ಹೃದಯ ಮಾಂಸದ್ದೋ
ಶಿವನು ವಾಸ ಮಾಡಿದ್ದೋ
ಕಟುಕರಂತೆ ಕೂಡಿದ್ದೋ
ನನಗೊಂದೂ ಅರ್ಥವಾಗದಾಗಿದೆ.

ನಿನಗಾಗಿ ಕೊರಗ ತಲಿದ್ದೇನೆ
ಹಸಿವು ತೃಷೆ ದೂರಿರಿಸಿದ್ದೇನೆ
ಕರಳು ಕತ್ತರಿಸಿ ಹೋಗುತಲಿದೆ
ತಲೆ ಮೆಲಕು ಆಡಿಸುತ್ತಲಿದೆ
ತಿಳಿಯದಿದ್ದಲಿ ಮಾಡುವದೇನು

"ದ್ರಾಕ್ಷವನ್ನು ನರಿ"
ನಿಲುಕದಿದ್ದಾಗ ಹುಳಿ ಎಂದಂತೆ,,
ನಿರಾಶವಾಗಿ ಹಿಂದಿರುಗಿದಂತೆ
ತಲೆ ಕೆಳಗೆ ಹಾಕಿ ನಾನಿಃಲೋಕ
ಯಾತ್ರೆ ಮುಗಿಸ್ತೇನೆ ನಿನಗಾಗಿ ನಿರಾಶ ತಾಳಿ

ನಿನ್ನಿಂದ ನನ್ನಾಶೆ ಗೋಪುರ ಬಹು ದೊಡ್ಡದು
ನಿತ್ಯ ಜೀವನಕ್ಕೆಂದು ಕಟ್ಟಿದೆನದು
ಶೇಕ ಮಹಮ್ಮದನ ಎಣಿಕೆಯಾಗ್ವದು
ಬಳಲುತಿದ್ದೆನು ಹಗಲು ಇರಳು ಅದಕೆ
ನನ್ನಾಶೆ ಆಗ್ಬಾರದು ಹಾಗೆಂದು ನಿನ್ನದು....?

ಪ್ರೇಮ [illegible] ಆಹಾರ.

## ಕಾಸಿನ ಸಂಘ

ಏನ್ಮಾಹಾರಾಯಾ.... !
ನಿನ್ನ ಸಹವಾಸ ಬೇಡ
ಹೆಜ್ಜೆಗೊಮ್ಮೆ ಕಾಡಸ್ತಿ
ಬೇಡಲಿಕ್ಕೆ ಹಚ್ಚತಿ
ಒಡಕ ಹುಟ್ಟಸ್ತಿ
ಪುನಃ ಕೂಡಸ್ತಿ
ಪ್ರೇಮ ಕೆಡಸ್ತಿ

ನಿನ್ನ ಸಹವಾಸದಿಂದ
ಸಿಗುವದೆರಡು
ಇದ್ದಾಗ್ಮರ್ಯಾದೆ
ಹೋದಾಗ ಅಪಕೀರ್ತಿ ಅಥವಾ ಚಿರಕೀರ್ತಿ
ಚಿರಕೀರ್ತಿ ಯಾವಾಗ ?
ಅದು ಒಳ್ಳೆದ ಮಾಡಿದ್ರ ಮಾತ್ರ;
ನೆಹರು ಮನೆತನದಂತೆ.

ನಿನ್ನ ನಂಬಿನಚ್ಚಿದ್ರ
ಹೆಂಡದಂಗಡಿಗೆ
ವೇಶ್ಯಯರ ಸಂಘಕ್ಕೆ
ಜೂಜಾಟ್ಗೆ ಕರೆದೊಯ್ತಿ,
ಕೆಟ್ಟಂತನಸ್ತಿ
ಪ್ರಸಸ್ತಿ ಕೊಡಸ್ತಿ
ಸಂಬಂಧಿಕರಿಂದಲ್ಲನಸ್ತಿ

ನಿನ್ನ ಸ್ನೇಹ ಇರುವದ್ದೀಗೆ
ಅಂದಾಗ ಮಾಡ್ಲೊ ಬಿಡ್ಲೊ
ತಿಳಿಯಲ್ದೇ ಹೋಗ್ಯಾದ
ಮಾಡಿದ್ರ ಹೀಗಾಗ್ತದೆ
ಮಾಡ್ದೆ ಹೋದ್ರೇ ಹಾಗಾಗ್ತದೆ
ನಂಬಿದ್ರ ಜೀವ ಸಾಗ್ತಾದ
ಇಲ್ದೆ ಹೋದ್ರ ಬಂದ ಬೀಳ್ತಾದ
.......... ಏನ್ಮಾಡ್ಲೀ .......... ?

ಆದಾಯ ಮೀರಿ ವೆಚ್ಚ ಮಾಡುವವನೇ ಬಡವ.

ಹೂವಿಗೆ ಸುವಾಸನೆ ಇದ್ದಂತೆ ಮನುಷ್ಯನಿಗೆ ವ್ಯಕ್ತಿತ್ವ

## ಬೆಳಗಲಿ

ಬೆಳಗಲಿ ನಮ್ಮ ನವ್ಯ ಕನ್ನಡ
ಬೆಳಗಲಿ ನಮ್ಮ ದಿವ್ಯ ಕನ್ನಡ
ಬೆಳಗಲಿ ನಮ್ಮ ಭವ್ಯ ಕನ್ನಡ
ಬೆಳಗಲಿ ಅದು ಶೊಳಗಲಿ

ರನ್ನ ಪೊನ್ನ ಜನ್ನರಿಂದ
ರಾಘವಾಂಕ ಹರಿಹರರಿಂದ
ದ. ರಾ. ಬೇಂದ್ರೆ ಪುಟ್ಟಪ್ಪನವರಿಂದ
ಸಮೃದ್ಧಿಯಾಗಲಿ ನಮ್ಮ ನಾಡ ನುಡಿ

ಶರಣ ಮಹಾತ್ಮ ಬಸವರಿಂದ
ದಾಸ ಸರ್ವಜ್ಞ ಸಾಹಿತಿಗಳಿಂದ
ನಮ್ಮಯ ಜಾನಪದ ಕವಿಗಳಿಂದ
ಬೆಳೆಯಿತು ಅದು ಉಳಿಯಿತು

ಕನ್ನಡ ನಾಡಿನ ಯುವಕರೇ
ಕನ್ನಡಕ್ಕಾಗಿ ದುಡಿಯಿರಿ ನೀವು
ಕನ್ನಡಕ್ಕಾಗಿ ಹೋರಾಡಿರಿ ನೀವು
ಕನ್ನಡಕ್ಕಾಗಿ ಮಡಿಯಿರಿ ನೀವು

ಪ್ರೇಮವಿಲ್ಲದ ವೈವಾಹಿಕ ಜೀವನ ಗುಲಾಮನ ದುಡಿತದಂತೆ.

# ನಿನ್ನ ಜಡೆಯಲ್ಲಿ

ಅಲ್ವೇ........?
ನಿನ್ನ ಜಡಿಯುಡಿಯಲ್ಲಿ
ಕಡಿದು ಹೂವಿಡಲು
ಅಡಿಗಡಿಗೆ ಸುವಾಸುತಿಸುದು
ನಿನಗದು.......!
ನಿನ್ನೊಬ್ಬಳ ಬಯಕೆಗಾಗಿ
ಸೊಗಸು ತೃಪ್ತಿಗಾಗಿ
ಮುಡಿಯಲುಬೇಡ
ಜಡೆಯಲ್ಲಿಟ್ಟುಕೊಳ್ಳಬೇಡ
ಶಿವಸಾನಿಧ್ಯಕರ್ಪಿಸಿ ಬಿಟ್ಟರೆ
ಸುವಾಸನೆ ಎಲ್ಲರಿಗೂ ದೊರೆಯುವದು,
ಸಹಸ್ರ ಜನರು ಪಡೆವರು
ಸರ್ವರು ಆನಂದಿಸುವರು
ಸ್ವಾರ್ಥ ಮಾನವ
ನಿಸ್ವಾರ್ಥ ಶಿವ.

ಪೋಲಿಸರ ಬಂಧನದಿಂದ ಬಿಡಿಸಿಕೊಳ್ಳಬಹುದು, ಹೆಣ್ಣಿನ ಪ್ರೇಮ ಬಂಧನದಿಂದ ಬಿಡಿಸಿಕೊಳ್ಳಲಿಕ್ಕಾಗದು.

# ನೋವು

ಹಾವು ಕಡಿದಿದ್ದು ನೋವಾಗಲಿಲ್ಲ
ಚೇಳು ಕಡಿದಿದ್ದು ನೋವಾಗಲಿಲ್ಲ
ಗುಂಡು ಹೃದಯ ಹೊಕ್ಕರು ನೋವಾಗಲಿಲ್ಲ
ಖಡ್ಗ ತಿವಿದರು ನೋವಾಗಲಿಲ್ಲ
ಇವುಗಳಾವವು ನೋವು ಮಾಡುವದಿಲ್ಲ
ಮಾಡಿದರು ನನಗೆ ಪರಿಣಾಮವಾಗುವದಿಲ್ಲ
ಆದರೆ.. ... !

ಅಂದಿನ ಆ ದಿನ ಆ ಸಮಯದಲ್ಲಿ
ಕೈ ಮಾಡಿ ಕರೆದ್ದು
ಸೆರಗ ಬೀಸಿ ಬಾ ಎಂದದ್ದು
ಕಣ್ ಸನ್ನೆ ಹಾಕಿದ್ದು
ಮುಸಿ ಮುಸಿ ಮುಗಳ್ ನಕ್ಕಿದ್ದು
ಕಣ್ಣರಳಿಸಿ ತೋರಿಸಿದ್ದು.
ನೆನಪಿಗೆ ಬಂಧಾಗ
ಮನಸ್ಸು ವಿಕಸಿಸುತ್ತದೆ
ವಿಕಾರ ವ್ವಾಗುತ್ತಿದೆ
ಎಲ್ಲಿಲ್ಲದಾ ಈ ನೋವು
ಸಹಿಸಲಾರೆ.......!
ತಡೆಯಲಾರೆ .. .... !

ಹೆಣ್ಣನ್ನು, ಹೊನ್ನನ್ನು, ಹಣ್ಣಾದ ಮರಗಳನು ಕಣ್ಣಲ್ಲಿ ಕಂಡು ಮನದಲ್ಲಿ ಬಯಸದಿಹ ಅಣ್ಣಗಳಾರು ?

ಸಾಹಿತ್ಯ ಒಬ್ಬ ವ್ಯಕ್ತಿಯದಲ್ಲ, ರಚಿಸುವವನದಲ್ಲ, ಅದು ದೈವವಾಣಿ.

# ಸಂಕ್ರಮಣ

ಬನ್ನಿರಿ ಮಕ್ಕಳೆ, ಬನ್ನಿರಿ ಮಕ್ಕಳೆ,
ನಾವೆಲ್ಲ ಇಂದು ಕೂಡುವಾ
ಎಳ್ಳು ಸಕ್ಕರೆ ತಿನ್ನುವಾ
ಸಿಹಿಯಾಗಿ ನಾವು ಬಾಳುವಾ

ಓ ತೆಗೆದು ಕೊಳ್ಳಿ ಬಾಂಧವರೆ
ಓ ಸ್ವೀಕರಿಸಿರಿ ಬಂಧುಗಳೆ
ಹೃದಯ ಸಹಿ ನೀಡುತಿಹೆವು
ನಿಮಗಿಂದು ನಾವು

ಅಕ್ಕರೆಯ ಅಕ್ಕಂದಿರರೆ
ನೆಚ್ಚಿನ ಅಣ್ಣಂದಿರರೆ
ಕಾದಿಹೆವು ಒಲವಿನ ಬರುವಿಕೆಗಾಗಿ
ಬರುತನಕ ಕಾಯುವಾ ಜೀವನ ಶಾಂತಿಗಾಗಿ

ಸಂತಸದಿ ಸಂಕ್ರಮಣದಲಿ
ಒಡನಾಟನಾಡುವ ಪ್ರೇಮದಲಿ
ವರ್ಷಾವಧಿಯಿಂದ ಬೆಂದ ಮನಕೆ
ಜೀವನಾದ್ಯಂತ ಶಾಂತಿ ಬೇಡುವಾ

ಹಾರಾಡಿ ಬೀಳುವದಕ್ಕಿಂತ ಬಾಗುವದೇ ಲೇಸು.

## ಪುರಾಣ

ಅಲ್ಲೋ ಖೋಡಿ. ಎಸೋ ನೀ
ಎಲ್ಲರೂ ನಿನಗ ಬೈತಾರಲ್ಲೊ
ಒಬ್ಬ ಪುಂಡ ಅಂದ್ರೆ
ಇನ್ನೊಬ್ಬ ಸುಳ್ಳ ಅಂತ ಕರಿತಾನ
ಯಾಕ ಹೀಗೆ
ನಿಜವಾಗಿ ನೀ ಏನ್ ಇದ್ದಿ ಹೇಳು
ಯಾಕಂದ್ರ ನಿನ್ನ ಸಹವಾಸ ಮಾಡಿದ ನನಗ
ಹುಚ್ಚ ಹಿಡಿದಂಗ ಆಗ್ಯಾದ
ಹೊಗಳ್ತಾರೊಬ್ರು ತೆಗಳ್ತಾರೊಬ್ರು
ಏನು ಅನ್ನೋದು ನನಗ ತಿಳಿದಾಂಗ ಆಗ್ಯಾ
ಅದಕ ಸ್ವಲ್ಪ ಹೇಳತಿಯಾ !
ಪ್ರಾರ್ಥನೆ ಅಪ್ಪಾ ನಂದು
ಹೇಳದಿದ್ರ ಎಣ್ಣೆ ಸೀಗಿಕಾಯಿ ನೋಡು ನಾ ನೀ
ನಿನ್ನ ಸಂಗದಾಗ ಸಾವಿರ ದಿನ ಕಳ್ದ್ರ
ಸಾಸಿವೆ ಕಾಳದಷ್ಟು ತಿಳಿಬಾರದೇನೊ ನಿನಗುಟ್ಟ ?
ಹುಟ್ಟಿರೆ ಎಂದ ? ಸಿಟ್ಟಿರೆ ಎಲ್ಲಿ ?
ಒಟ್ಟಿಗೆ ನಿನಗ ತಳಾ, ಬುಡಾ, ಇಲ್ಲ ಅನವರೆ ಭಾಳ
ಬರಿ ನೀ ಒಬ್ಬ ಹೊಗ್ಳ ಭಟ್ಟ
ಹೊಗ್ಳ ಭಟ್ಟರಿಗೂ ಹಿಂದ ಒಂದ ಕಾಲ ಇತ್ತು
ಆದ್ರ ಈಗ ಕಾಲ ಬದ್ಲ ಆಯ್ತು
ಸಮಾಜ ಅನ್ನೋದು ಹರಿಯುವ ನೀರಿನ ಪ್ರವಾಹದ ಹಾಗೆ
ಪಾಪ ಅದು ನಿನಗೇನು ಗೊತ್ತು

ಅಪ್ಪಾ ಈಗ್ಲಾದ್ರೂ ಬಿಡ್ತಿಯಾ ನಿನ್ನ ಕೆಲ್ಸ
ಕಣ್ಣ ತೆರಿ ಸ್ವಲ್ಪ ನೋಡು
ಏನ ಅದ ಹ್ಯಾಂಗ ಅದ ಅನ್ನೂದು
ಆವಾಗ ನಿನಗೇ ಸ್ವಲ್ಪ ಬೆಲೆ
ನಿನ್ನ ಹೆಸರ ಮಾತ್ರ ನಿನಗ ಉಳಿದಾಂಗ ಆಗ್ತಾದ
ಹೇ ಅದ್ರಿಂದ ನೀ ಏನ್ ಖೇದ ಪಡಬ್ಯಾಡ
" ಯಾವಾಗಲೂ ವ್ಯಕ್ತಿಗೆ ಗೌರವ ದೊರೆಯೋದು
ಕೆಲ್ಸದಿಂದ, ಹೆಸರಿನಿಂದಲ್ಲ "
ನೆನಪಿಡು

ನಿನಗಿಂತ ಒಳ್ಳೆಯವನಲ್ಲದವನೊಡನೆ ಸ್ನೇಹ ಬೆಳೆಸಬೇಡ

## ವಸಂತ

ಸಂತಸದ ಸವಿ ನೆನಪು
ವಸಂತ ಮಾಸದ ಹುರುಪು
ನೋಡಿದಲ್ಲಲ್ಲಿ ಮನ ಹಸಿರು
ಬರುತಿದೆ ಕಂಡು ನಗೆ ಉಸಿರು

ಕೋಟಿ ಚಿಟ್ಟೆಗಳು ಹಾರಾಡುತಿವೆ
ಸಹಸ್ರ ಪ್ರಾಣಿಗಳಾಟ ಆಡುತಿವೆ
ನೋಡಲ ಧೋ ಸಿಂತಿವೆ ಹೂಗಳು
ಒಂದೆ ನಿನಾದದೋಳು ಗುಂಯ್‌ಗುಟ್ಟುತಿವೆ ಭ್ರಮರಗಳು

ಮೋಡ ತುಂಬಿ ಕೊಂಡಿಹುದಾಕಾಶ
ನಾಡನಾಡಿಗೆ ತಂಪು ಸುರಿಸಲು
ಹರುಷವನ್ನು ತಂದಿರಿಸಲು
ಉಳಿವ ಪ್ರಾಣಿಗಳಾಶ ಪೂರೈಸಲು

ಸೋಸಿ ಸುಳಿವ ಗಾಳಿಗೆ ಗಿಡಗಳು
ತಲೆ ಹಾಕಿ ಕರೆಯುತಿವೆ ನಮ್ಮನು
ಮಳೆರಾಯನ ಸ್ವಾಗತಿಸಲೆಂದು ನಾವು
ಒಗ್ಗಟ್ಟನಿಂದ ಐತರದೆಲೆಂದು ನಾವು

ನಮ್ಮ ಭೂ ಮಾತೆಯುದರದಲಿ
ಕೋಟಿ ಮಕ್ಕಳು ಜನಿಸಿಹೆವು
ರಕ್ಷಿಸಲು ಭೂಮಾತೆ ಕಷ್ಟ ಪಡುತಿಹಳು
ಮಕ್ಕಳ ಏಳ್ಗೆಯನೆ ಹಾರೈಸುತಿಹಳು



ಸೋಮಾರಿತನದಲ್ಲಿರುವ ಒಂದೇ ಒಂದು ಕೆಡಕು — ಅಸುಖ.

ಹೆಂಗಸನ್ನು ನೋಡಬೇಕು, ಅವಳ ಬಗ್ಗೆ ಕೇಳಬಾರದು

## ದೀಪಾವಳಿ

ಬಂದಿತು ದೀಪಾವಳಿ
ತಂದಿತು ಹರ್ಷಾವಳಿ
ಚಂದದಿ ದೀಪಗಳು
ಅಂದದಿ ದೃಶ್ಯಗಳು

ಎಲ್ಲೆಲ್ಲೋ ಪಟಾಕಿ ಶಬ್ದ
ಅಲ್ಲಲ್ಲೋ ಹುಡುಗಾಟಕೆ ಚೀರಾಟ
ಢಂ ಢಂ ಯುದ್ಧದಂತೆ
ಮದ್ದು ಸುಡುವ ಜಾತ್ರೆಯಂತೆ

ಬಾಗಿಲ ತಲೆಯ ಮೇಲೆ
ತೂಗುತಿದೆ ಆಕಾಶ ದೀಪ
ಹೆಸರಿಗೆ ತಕ್ಕಂತೆ ಅದು ಆಕಾಶ ದೀಪವೇ
ಬರಿ ಆ ದಿನದ ಆದರ್ಶದ ಯಾತಕ

ಬಣ್ಣ ಬಣ್ಣದುಡಿಗೆಗಳು
ಚಿನ್ನ ರನ್ನದೊಡವೆಗಳು
ಸಂತೋಷದಿ ತೊಟ್ಟು ನಾವು
ಸಡಗರದಿ ಹಬ್ಬ ಆಚರಿಸುವಾ

ಉಂಡಿ ಲಾಡು ಪೇಡಿ
ತಂದು ಅಮ್ಮ ನೀಡಿ
ತಿಂದು ಹರ್ಷದಿ ಹಾಡಿ
ಇಂದು ಬಾಳೋಣ ನಾವೆಲ್ಲ ಕೂಡಿ

ಹೆಣ್ಣಿನ ಜನ್ಮ [illegible] ಅನಂತವಾದ ಸಹನ ಶೀಲತೆಯ ಜನ್ಮ

## ಓ....ಎನ್ನ ಮಾತೆ

ಓ .. ಎನ್ನ ಮಾತೆ
ಹೃದಯ ತುಂಬಿ ನಿಂತಿರುವಿ
ವಿಶಾಲ ಮನೋಭಾವ ತಾಳಿರುವಿ
ಬರುವ ಮಕ್ಕಳಿಗೆಲ್ಲ ಸ್ವಾಗತಿಸುವಿ
ನಿನ್ನಲ್ಲಡಗಿದ ವಿಶಿಷ್ಟ ಶಕ್ತಿ
ಪಾಮರನಿಗೆ ತಿಳಿಯದು
ನಿನ್ನ ಹೃದಯ ಹೊಕ್ಕಾಗ
ಹುಚ್ಚನಾಗುವೆ
ಮತ್ತೆಚ್ಚರನಾಗುವೆ
ನಿನ್ನಂತಹ ಮಾತೆಯ
ಮಡಿಲಲ್ಲಿ ಬೆಳೆಯುತ್ತಿರುವ
ನಾನೇ ಧನ್ಯ.... !
ನನ್ನ ಮಾತೆಗೆ ಸಹಸ್ರ ಸ್ತನಗಳಿವೆ
ದಿನಕ್ಕೊಂದು ಸ್ತನದ ಹಾಲು ಸೇವಿಸುವೆ
ಉಂಬ ಪಟ್ಟು ಕೊಳ್ಳುವೆ
ಅದರ ರುಚಿ ವಿಸ್ತರಿಸುವೆ
ಸಂತೋಷ ಪಡುವೆ
ಒಮ್ಮೆ ದಿಙ್ಮೂಢನಾಗುವೆ
ಇಷ್ಟೂ ಸ್ತನಗಳ ಹಾಲು ಸೇವಿಸುವೇನೋ ? ಇಲ್ಲೋ ?
ಎಂಬೀ ಶಂಕೆ.... ?
ಕುಡಿಯದೇ ಹೋದರೆ
ಸ್ತನ ಭಾರ ಹೆಚ್ಚುವದು

ಕುಡಿದರೆ ಹಗುರಾಗುವವು
ಹಿಃಯಿಂದ ಹರಸುವಳು
ಇಲ್ಲದಾದ್ರೆ ಕೋಪಿಸುವಳು
“ ಮಾತೆ ಮುನಿದರೆ ಮಗು ಬದುಕಬಹುದೇ ” ?
ಮಾತೆ ಹಾಡಿ ಹರಿಸಲೆಂದು
ಕುಡಿವೆನು ದಿನಕ್ಕೊಂದು ಸ್ತನ
ದಷ್ಟ ಪುಷ್ಟನಾಗುವೆ ಕವಿಗಳೊಡನಾಡುವೆ,
ಮಾತೃ ಹೃದಯಕ್ಕೆ ತೃಪ್ತಿ ನೀಡುವೆ

## ಪೌರಾಣಿಕ ಕಥೆ

" ಸತ್ಯಂ ಭ್ರೂಯಾತ್
ಪ್ರಿಯಂ ಭ್ರೂಯಾತ್ "
ಬರೀ ಇದು ನಾನೀ ಹೇಳಿದ್ದಲ್ಲ
ನಮ್ಮ ಹಣಜನ ಹಣಜ ಹೇಳಿದ್ದು
ಬರೀ ನಾನೀ ಕೇಳಿದ್ದೂ ಅಲ್ಲ
ಹಿಂದಿನಿಂದ ನನ್ನವರೆಗಿನ ಜನಾ ಎಲ್ಲಾ ಕೇಳಿದ್ದು
ಆದ್ರ ನೀ ನಿಂದು ಮರಿ ಬ್ಯಾಡ
ಮರ್ತ ಮರ್ಗ ಬ್ಯಾಡ
ನನ್ಗ ಮಾನ ಸಿಗಲಾರ್ದ್ ಹಾನಿ ಆಯ್ತು ಎಂದು
ಎಷ್ಟಾದರೂ ಪುರಾಣ ಕಥೆನಾ
ನಾನೀಗ ಹೇಳಿದ್ರು ಜನಾ ನಂಬುತ್ತೆ ಅನ್ನೋದು
ಹೌದಪ್ಪಾ! ನ ಕಾಲ ಹಾರಿ ಹೋಯ್ತು
ನಿನ್ನ ಈಗ ಕೊರಿತಾರ ಕೊಯ್ತಾರ
ಮರಿಗೆ ಹಚ್ಚಿ ನೋಡತಾರ
ಹ್ಯಾಂಗ ಮಾಡ್ತಿ ಆಗ ?
ಬರಿ ಬಂಡವಾಳ ಇಲ್ಲದ ಬಡಾಯಿ ಆಗ್ತಿಯಾ ?
ಏ ಹಾಂಗೇನೂ ಆಗ್ಲಿಕ್ಕಿಲ್ಲಾ
ತಿಲದಷ್ಟಾದರೂ ಹುರುಳ ಹೊಂಟೆ ಹೊಂಡುತ್ತೆ,
ಅದೇನೋ ಅಂತಾರಲ್ಲ " ಕಣಕ ಸೇರಿನಷ್ಟು
ಹುರುಣ ಅರ ಸೇರಿನಷ್ಟು " ಅಂತ
ಹಾಂಗ ನೀSSS ...

# ಹರಕತ್ತಿಲ್ ಮಗನಾ

ಹರಕತ್ತಿಲ್ ಮಗನಾ
ಹುಟ್ಟಿದ್ರ ನಿನ್ನಂಥಾ
ಮಗ ಹುಟ್ಬೇಕು
ಅದೂ ನನ್ನುದರದಾಗ

ಹಡೆದವನಿಗೆ ಸ್ವಾಭಿಮಾನ
ಪಡೆದವರಿಗೆ ಕೀರ್ತಿ
ನಿನ್ನೋಡಿದವರಿಗಂತೂ ಹರ್ಷವೇ ಹರ್ಷ
ಹಳ್ಳ್ಯಾಗ ಹುಟ್ಟಿದಿ

ಪಟ್ಟಣದಾಗ ಬೆಳದಿ,
ವಿದ್ಯಾ ಬುದ್ಧಿ ಪಡದಿ
ಇಲ್ಲಿ ಸಾಲದೇ
ಪರದೇಶಕ ಹ್ವಾದಿ, ಕಲ್ತು ಬಂದಿ,

ಅದಕೆಲ್ಲಕ ಭಲಾ ಅಂದ್ರು
ಬಾಲಾ ಹಚ್ಕೊಂಡು
ಮಂಗನ ಹಂಗ ಕುಣಿಲಿಲ್ಲ
ಸತ್ಸಂಗದೊಳ್ ಇದ್ಕೊಂಡಿ,

ದೇಶಾಭಿಮಾನ ಪಡ್ಕೊಂಡಿ,
ಧರ್ಮಾಭಿಮಾನ ಹಿಡ್ಕೊಂಡಿ,
ಇವುಗಳಿಗ್ಹೊರಾಡೋಣವೆಂದಿ,
ಶಾಂತಿ ಧ್ವಜ ಕೈಯಲ್ಲಿಡಿ,

ಕತ್ತಲೆಯ ಗರ್ಭದಿಂದಲೇ ಬೆಳಕಿನ ಆರಂಭವಾಗುವದು!

ಸತ್ಯದ ಮಂತ್ರೊಂದು ಕಲ್ಸಿಕೊಟ್ಟ
ಸಮಾನತೆ " ಎಲ್ಲರು ಒಂದೇ ಎಂದಿ
ದಾಸ್ಯದ ಬದಕು ಹರ್ದು
ಸ್ವಾತಂತ್ರ್ಯ ಲಾಸ್ಯದ ಬದ್ಕ ತಂದುಕೊಟ್ಟ

ಅದ್ಕ ಈಗ ಹ್ಯಾಂಗ ಮಾಡಿದ್ದಿ ಗೊತ್ತಾ ?
ಬರ್ದ್ದಾಗಿನ ಹೆಣ ಆಗಿ ಆಗ ಸಾಯುತ್ತೇ
ಈಗ ಸಾಯುತ್ತೇ ಅನ್ನುವಂಗ ಆಗ್ಯಾರ.



ಏನೂ ಇಲ್ಲದವನು ಬಡವನಲ್ಲ; ಇನ್ನೂ ಬೇಕು ಎನ್ನುವವನೇ ಬಡವ.

ಇರುವದಕ್ಕೆ ಸಂತೋಷಿಸಿ, ಇಲ್ಲದುದಕ್ಕೆ ದುಃಖಿಸದವನು ಬುದ್ಧಿವಂತ.

## ಕಲಿಯುಗ

ಕಲಿಯೋ ತಮ್ಮಾ ಕಲಿ
ಕಲಿಯುವದ್ಯಾವಾಗ
ಈ ಯುಗ ಕಲಿಯುವದೈತಿ
ನೀನು ಕಲಿಯದೇ ಕುಳ್ತರ
ಯುಗಕ್ಕೆ ವಿರೋದ ಆಗ್ತಿ
" ಸತ್ಯ ಹೇಳುವದು "
" ವಂಚನೆ ಮಾಡದಿರದು "
" ಮನ ನೋಯಿಸದಿರದು "
ಕಲಿಸುವರು ಬಂದು
ಬಾಯ್ ಬಾಯ್ ಬಡಕೊಳ್ಳಕತ್ರು
ಕಲಿಯೋ ಅಂತ ಹೊಯ್ಕೊಳ್‌ಕತ್ರು
ಕೈ ಮುಗಿದ ಕೇಳ್ಕೋತಿನಿ ಕಲಿ,
ನಮ್ಮಜ್ಜ ಹೇಳಿದ್ದಾಗೆ
ತ್ರೈತಾಯುಗದಲಿ ಬಡಿದು
ದ್ವಾಪರದಲಿ ಬೈಯ್ದು
ಕಲಿಯುಗದಲಿ ಕೈ ಮುಗಿದು
ಕಲ್ಸಬೇಕು, ಹೌದು ಸರಿ,
ಆ ಮಾತು ಸಾವಿರ ಪಾಲಿಗೂ ಸತ್ಯ
ಹಿಂದಿನ ಹಿರಿಗೊಳ್ಗೆ ಕಾಲ ಬಿದ್ದು ಕಲಕೊಳ್‌ತಿದ್ರು
ಈಗ ನಿನತನಕ ಬಂದು ಕೇಳಕೊಳ್‌ತಿರುವಾಗ
ನಿನಗ ಅವ್ರದೇನು ಗುಮಾನ ಇಲ್ಲ
ಹಾಂಗ ಮಾಡಬೇಡ
ಇನ್ನೂ ಸಮಯ ಮುಂದ ಬಹಳ ವ್ಯತ್ಯಾಸ
ಕಾಣ್ತದ
ಕಲಿ, ಕಲಿ, ಕಲ್ಕಿನ ಒಲಿ
ಇಲ್ಲಿ ಸ್ಪರ್ಧೆ ನಿನ್ನ ಅರ್ಧ್ಯ ಬಲಿ

ಜಂಭದ ಬ್ರಹ್ಮಚರ್ಯಕ್ಕಿಂತ ದೈನ್ಯದ ಮದುವೆ ಲೇಸು.

## ಪುಷ್ಪ

ತಂದಿಹೆನು ಪುಷ್ಪೊಂದು
ನಿನಗದರ್ಪಿಸಲೆಂದು
ನಿನ್ನ ಪಾದದಡಿಯಲ್ಲಿಡಲೆಂದು
ಪಡೆದು ಧನ್ಯ ಮಾಡುದೇವಾ
ಬಹುಕಷ್ಟದಲಿ ಪಾರಾಗಿ ತಂದಿಹೆನು
ಎಂಬತ್ನಾಲ್ಕು ಲಕ್ಷ ಸೈನಿಕರ ಕೊಂದಿಹೆನು
ಆರು ಜನ ದರೋಡೆಕೋರರಿಂದ ಕಣ್ತಪ್ಪಿಸಿದೆನು
ಒಂಬತ್ತು ರಾಜ್ಯದ ಬಾಗಿಲಲ್ಲಡಗಿದೆನು
ಕಡುನೊಂದು ಬೆಂದು ತಂದಿಹೆನು
ಬಹು ಸಂಕಟದಲಿ ಬೆಳೆಸಿದೆನು
ಸುತ್ತ ಮುತ್ತಲು ಮುಳ್ಳಿನ ಬೇಲಿ ಬಂಧನ
ಸ್ವಲ್ಪಲ್ಲಾಡಿದರೆ ಕರುಳಿಗೆ ಕಂಪನ
ಪರಿತಪಿಸಿ ತಂದಿಹೆನು ನಿನ್ನಲ್ಲಿಗೆ ನಾನು
ಪಡೆದು ಸ್ವೀಕರ್ತನಾಗು ಶಿವನೆ
ಉದ್ಧರಿಸು ಈ ನನ್ನ ಪುಣ್ಯ ಜೀವನವಾ
ನಿನ್ನುದರದಲ್ಲಡಗಿಸಿಕೊಳ್ಳು ನನ್ನ



ಮಹಾತ್ಮರು ಮಿಣುಕು ದೀಪಗಳ ನಡುವಿನ ಮಹಾಜ್ಯೋತಿ.

ನಾವು ಇತರರಿಗೆ ಮಾಡುವದನ್ನೆ ದೇವರು ನಮಗೆ ಮಾಡುತ್ತಾನೆ.

## ಸೌಖ್ಯದ ಸಿರಿ

ಶಿಥಿಲವೇ ಸಂಸಾರವು
ಮರುಳತ್ತಿ ಈ ಆಟವು
ಹೀನರಿಗಿದರರಿವು
ನಿಲಕಳಲವೇ ಗುರುವೆ

ಶಿರಿಯ ಪೆರ್ಚುಗೆಯಲಿ
ಮದ ಮತ್ಸರ ಮಾಯೆಯಲಿ
ಹಿಡಿದಿರಿಸಿ ಕೊಳಲಿಳವೇ
ಘದವಾದ ಈ ಸೌಖ್ಯವು

ಶಿವನೇ ಸಿರಿ ಎಂದರಿ
ಮಹಾಘನ ನಿಹನವನು
ಹಿಪ್ಪೆಯು ಸಂಸಾರ ಒಪ್ಪುವಾಗುವದಾಗ
ಇದರಿ ಇತರರಿಗೆ ವರಿ
ಇದು ಮಹಾ ಸೌಖ್ಯದ ಸಿರಿ.

ತಿಳಿದಿರುವದಕ್ಕಿಂತ ಕಡಿಮೆ ಮಾತನಾಡು.

## ಕೊಡೆ

ನಿನ್ನೆರಳಲಿ ಇರಬಯಸಿದೆನ್ನ ಮನ,
ಆತುರ ಪಡುತ್ತಿದೆ ಈ ದಿನ,
ಅಂದಲ್ಲ ಇಂದಲ್ಲ ಬಹುದಿನಗಳ,
ಬಯಕೆ ಇದೆ ಎನ್ನಾತ್ಮದಲಿ.... !
ನಿನ್ನಾಶ್ರಯ ಈಗ ಪಡೆಯುವಾಸೆ,
ಮಳೆಗಾಲ ಋತು ಬಂದ ಕಾರಣ.

ಈ ಋತು ದಾಟುವರೆಗೆ ನಿನ್ನಾಶ್ರಯ
ಥಾಟದ ಮೇಲೇನು ? ಮಾಡುವದು
ಇದೇ ಸಮಯ ಸರಿಯಾಗಿ ವಿನಿಯೋಗ
ನನ್ನಿಂದ ನಿನಗ, ನಿನ್ನಿಂದ ನನಗ,.... !
ಮುತ್ತು ಒಡೆದರಾಯಿತು, ಹೊತ್ತು
ಜಾರಿದರೆ ತೀರಿತು, ಗೊತ್ತಾ

ಮಿಂಚಿ ಹೋದ ಮಾತು ಚಿಂತಿಸಿದ್ರೆ
ಮತ್ತೆ ಬಾರದು ನೆನಪಿರಲಿ
ಈ ಋತುವಿನಲಿ ಮಾಡಿದ ಸಹಾಯವೆ
ನಿಜವೆಂದು ಭಾವಿಸು.... !
ಚಳಿಗಾಲಕೆ ನೀ ನನ್ನಲ್ಲಿಗೆ ಬಂದರೆ
ಉಪಯೋಗವಾಗುವದಿಲ್ಲ ವೆಳ್ಳಷ್ಟು
ಈ ಸಮಯ....ವೇಳೆ.... time
ಸಿಗಲಾರದು ಮತ್ತೆ you think.

ನಿನ್ನೆರಳಲೀಗ ಇರಬಯಸಿದೆನ್ನ ಮನ
ಈ ಋತುವಿಗೆ ಸಹಾಯವಾಗು

# ಸುಗಂಧದ ಹೂವು

ಅವರ ಯಾಕ ಅಷ್ಟೊಂದು,
ಆತುರ ಪಡುತಿದ್ದಾರ
ನಾ ಮುಂದ ನೀ ಮುಂದ
ಅಂತ ದುಮುಕಲಕತ್ತಾರ,
ಅಲ್ಲೇನಿದೆ ?
ಓ—ಹ್ಹೊ .. ಹೂವು !
ಯಾವ ಹೂವಿದು,
ಹೌದಿದು ಸುಗಂಧದ ಹೂವು
ಸುವಾಸನೆಯಿಂದ ಕೂಡಿದ್ದು
ಬಹು ಚೆನ್ನಾಗಿ ಕಾಣುತ್ತತೆ
ನೋಡಿದರೆ ಕಣ್ಗಳರಳುತ್ತಿವೆ
ಮುಡಿದರೆ ಎಷ್ಟು ಮನೋಹರ.
ಅದಕಂತ್ಲೆ ಅವ್ರು ಧುಮ್ಕುತಾ ಇರೋದು,
ಅಲ್ಲಾ ಇವ್ರು
ಹೂವು ಪಡೆಯುವದಾದ್ರು ಹೆಂಗೆ ?
ಸುತ್ತ ಮುತ್ತ ಮುಳ್ಳಿನ ಬೇಲಿ
ಕೆಳಗೆ ಕ್ರೂರ ಹಾವು .. !
ಇವುಗಳಿಂದ ಹೇಗೆ ಪಾರಾಗ್ತಾರ
ಹೂವನ್ನು ಹೇಗೆ ಅಪಹರಸ್ತಾರ,
ಸ್ವಲ್ಪೊತ್ತ ನೋಡ್ತಿನಿ
ಮೋಜ ಆಗಾಂಗ ಕಾಣಸ್ತಾದ.
ಅಷ್ಟರಲ್ಲೊಬ್ಬ ಮುಂದ ಬಂದ,
ಹೂವು ಮುಡಿಬೇಕೆಂದ, ಆತುರದಿಂದ

## ವಿದ್ಯೆ ಕಲಿಸದ ತಂದೆ ತಾಯಿಗಳು ಮಗುವಿನ ಶತ್ರುಗಳು.

---

ಹಗರಾಗಿ ಚಿಕ್ಕ ಚಿಕ್ಕಾಗಿ.... !
ಹಜ್ಜೆ ಇಡ್ತಾ ಮುಳ್ಳ ಬಯಲ್ ಮಾಡ್ದ.
ಹೂವು ತಗೋಳ್ಳಕ್ಕೋದ,
ಸರ್ ಸಪ್ಪಳ ... ಮಾಡಿದ್ದೇ ತಡಾ
ಬುಸ್ಸೆಂದು ಹವು ಒಮ್ಮೆ
ಅಡಿಯಿಂದ ಮುಡಿಗೆ ಬಂತು
ಆಗ್ಗಡಬಡಿಸಿ ಬಿದ್ದೆದ್ದು
ಮುಳ್ಳ ಮುರ್ಕೊಂದು, ಹೊಯ್ಕೊಂಡು.
ಪ್ಯಾಂಟ್ನ ಸೂಟ ಹರ್ಕೊಂಡು
ಓಡಾಕ ಹತ್ತಿದ. ... !
ಬೀದಿ ನಾಯಿ ಬೆವ್ರಿ ಬೆನ್ನಟ್ಟಿದವು
ನೋಡಿದ ನಂಗೆ,
ಯಾಕಪ್ಪಾ ಹೂವುಗೆ ಕಷ್ಟ ಕೊಡೂದೂ ssss
ಪಶ್ಚಾತ್ತಾಪ ಪಟ್ಕೊಳ್ಳೂದು
ಸುಮ್ನಿದ್ದು ಸ್ವಲ್ಪ ಕಾಲ ಕಳಿದ್ರ,
ಹೂವು ಕಾಯಾಗ್ತದ
ಫಲ ಪಕ್ವ ಆಗ್ತದ
ಅದು ನಿನ್ಗೇ ಬರ್ತಾದ
ತಿಂದ್ರ ತೃಪ್ತಿ ಸಿಗ್ತಾದ
ಹೂವಿದ್ದಾಗ್ಲೆ,
ವಾಸಿಸಿದ್ರ ಕ್ಷಣಿಕ ಆಗ್ತಾದ,
" ತಾಳಿದವನು ಬಾಳಿಯಾನು "
ಹಿರಿಯರು ಹೇಳ್ಯಾರದ್ಕೆ,
ನಿಮ್ಮಂತವ್ರು ತಿಳಿದುಕೊಳ್ಳೋಕೆ.

---

ಮಠಗಳು ಸ್ವಾಮಿಗಳ ಸಂಭಂದಿಕರ ಸಂರಕ್ಷಕ ಕೇಂದ್ರಗಳಾಗಿವೆ.

---

# ಮುದ್ದು ನಾಯಿ

ಮುದ್ದು ನಾಯಿ, ಮುದ್ದು ನಾಯಿ
ಬಾರೆ ಬೇಗ ಬಾರೆ ಬೇಗ
ತಿನ್ನಲು ಅನ್ನವು ಹಾಕುವೆ ನಿಂಗೆ
ತಿಂದು ನನ್ನ ಜೋಕೆ ಮಾಡ ಮಿಯಂದು.

ನಾನ್ ಗಳಿಸಿದ ಹಣ ನಿನಗೆ ತೋರಿಸುವೆ
ಒಚ್ಚಿಡುವ ಹಣವೆಂದು ಕಿವಿ ಮಾತಾಡುವೆ
ಸ್ವಚ್ಛ ಮನಸ್ಸಿನಿಂದ ಕಾದು ಕೊಂಡು ಹೋಗುವೆ
ಸಿಚ್ಚಳವಾಗಿ ಪ್ರಮಾಣ ಮಾಡಿ ಹೇಳ್ ನನಗೆ

ಕಳ್ಳ ಕಾಕರು ಬಂದರವರಿಗೆ
ಬೌ ವೌ....ವೆಂದು ಸಪ್ಪಳ ಮಾಡುವಿಯೋ .
ನಿನಗೆ ಬೆದ್ರಿಸಿದವರಿಗೆ ಸಪ್ಪಗ ಹುಳಿ ಸಿಹಿ ತಿಂಡಿ
ಬಾಯ್ ಗೊರಸಿ ಕಳಿಸುವಿಯೋ ?

ಮನೆ ಜವಾಬ್ದಾರಿ ನಿನಗೊಪ್ಪಿಸಿ ಬಿಡುವೆ,
ತ್ರಿಜೋರಿ ಕೀಲಿ ಕೈ ನಿನ್ನ ಕೊರಳಿಗೆ ಕಟ್ಟುವೆ,
ಗಳಿಸಿದ್ದಣ ಬೆಳೆಸಿಕೊಂಡು ಹೊಗೆನ್ನುವೆ,
ಉತ್ತಮವಾಗಿ ಬಾಳ್ ನೀ ನನ್ನ ಮನೆಯೋಳಗೆ

ಹರಿಸಿ ಸಂತೈಸುತ ನಿನ್ನ ಕೂಡಿ ಇರುವೆ
ಅಲ್ಲಿ ವರೆಗೆ ನಿನ್ನ ಬಹು ಜೋಕೆ ಮಾಡುವೆ,
ನಿನ್ನ ನಿಜದುವು ನಿನಗೆ ಬರುವರೆಗೆ
ಬೆಳೆಸುವೆ ನನ್ನ ನೆರಳೊಳಗೆ.

---

[illegible]

ಇನ್ನೊಬ್ಬರ ಕಷ್ಟದಲ್ಲಿ ನಿನ್ನ ಸಂತೋಷವನ್ನು ಕಾಣದಿರು

## ನೇಗಿಲ ಯೋಗಿ

ಇವನೇ ನೋಡು ಜಗದ ತಂದೆ
ರಕ್ಷಿಸನು ಜಗವೊಂದೆ ಎಂದು
ಅವನಿಂದ್ಲೆ ನಮ್ಮ ಉದ್ಧಾರ
ನಮ್ಮ ಮಾತೆಯ ಉದ್ಧಾರ

ನಿನ್ನ ಉಪಕಾರ ಬಹು ದೊಡ್ಡದು
ಸ್ಮರಿಸುತಿಹೆವು ಹಗಲಿರಳು
ನಿನ್ನ ಅನ್ನ ಉಂಡ ನಾವೇ ಧನ್ಯರು
ನಿನ್ನಾಶ್ರಯದಲಿ ಬದಕುವ ಪುಣ್ಯಜೀವಿಗಳು

ಚಳಿ ಇರಲಿ, ಮಳೆ ಬರಲಿ,
ಬಿಸಿಲು ಮೇಲೆ ಹಾಕುತಿರಲಿ,
ಫಡ ಫಡನೆ ಗದ್ದರಿಸುತಿರಲಿ,
ಇವುಗಳಿಗಂಜದೆ ಶ್ರಮ ಪಟ್ಟು ಕೊಳ್ಳುವಿ,

ನೀನು ದುಡಿದ ಬೆವರಿನಿಂದ
ಭೂಮಾತೆ ಸ್ನಾನ ಮಾಡುವಳು
ಹಸಿರು ಸೀರೆಯುಟ್ಟು ಕೊಳ್ಳುವಳು
ಕುಣಿ ಕುಣಿದು ನಲಿಯುವಳು

ನೇಗಿಲ ಯೋಗಿಯನ್ನು ತನ್ನ ಸ್ತನದ
ಸವಿ ಕುಡಿಸುವಳು, ಕುಣಿದಾಡಿಸುವಳು,
ವರ್ಷಾವಧಿ ಆನಂದದಲ್ಲಿರಿಸುವಳು
ಸಂತಸದಲಿ ಕಾಲ ಕಳೆಸುವಳು.

# ನೀನ್ ಏನ ಇದ್ದಿ

ಅಲ್ಲ ನೀನ್ ಏನ ಇದ್ದಿ
ನಿನ್ನಲ್ಲಡಗಿದೆ ಏನು ?
ತಪಶ್ಚಿನ ಶಕ್ತಿಯೋ ?
ಅನುಷ್ಠಾನ ಬಲವೋ ?
ಮಹಾತ್ಮರ ಕೃಪೆಯೋ ?
ಏನ್ ಸ್ವತಾ ಸಿದ್ಧಿಯೋ ?
ಇವುಗಳಲ್ಲಿ ಯಾವುದಿದೆ ಹೇಳು ?
ಯಾಕಂದ್ರ, ನಿನ್ನ ದೃಷ್ಟಿ ಹಾಯಿಸಿದ್ರ
ಮೌನ ತಾಳತಾರು, ಸಮೀಪ ಹೋದ್ರ,
ಬೆಂಕಿ ಸಮೀಪ ಬೆಣ್ಣಿಟ್ಟಂಗಾಗ್ತರ
ಹೇಳದಂಗ ಕೇಳ್ತಾರ
ತವ್ಮ ತಮ್ಮಲೇ ತಿಕ್ಕಾಟ ಮಾಡಿ ಕೊಳ್ತಾರ
ಮತ್ತ ನಿನ್ನಲ್ಲಿಗೆ ಬಂದು ಬೇಡಿ ಕೊಳ್ತಾರ
" ನಿನಗೊಲಿದು ಬರುವ ಭಕ್ತರು
ಬಹಳ ಕಾಣಸ್ತಾರ "
ಒಬ್ಬರ ಮೇಲೊಬ್ಬರು ಬಂದು
ಓ ದೇವತೆಯೇ.... !
ನನ್ನೊಲಿದು ಉದ್ಧರಿಸು
ಕೇಳಿ ಕೊಳ್ತಾರ
ನೀನೊಬ್ಬರನ್ನು ಒಲಿಯುವಿ,
ಅವರ ಮನ ತುಂಬುವಿ,

ಇನ್ನೊಬ್ಬರನ್ನು ಒದೆಯುವಿ
ಅವರೆದೆ ನಡುಗಿಸುವಿ
ತಲೆ ಕೆಳಗೆ ಮಾಡಿಸುವಿ
ಕೊನೆಯುವರೆಗುಳಿಸಿ ಕಾಡಿಸುವಿ
ಸಮಾಜಕ್ಕಾದರ್ಶಳಾಗಿ ತೋರುವಿ
ಅದಕ್ಕೆ ನೀನ್ ಏನ ಇದ್ದಿ
ಯಾರ....ಇದ್ದಿ ತಿಳಿಸ್ಕೊಡು.

# ಜೀವನ ಜೋಕಾಲಿ

ಜೀಕುತಿದೆ ನೋಡು ಜೋಕಾಲಿ
ಬಾಗಿದ ಟೊಂಗೆಗೆ ಹತ್ತಿ
ನೀಳವಾಗಿ ನೇತು ಬಿದ್ದಿದೆ
ಹಿಡಿಯಲಾಸೆ ಪಟ್ಟರೆ
ಸಿಗೋದೆ ಇಲ್ಲ ನನ್ನ ಕೈಗೆ
ಎಂತಹ ಜೋಕಾಲಿ ಇದು
ಹೋಗುತಿದೆ ಬರುತಿದೆ
ನೋಡಲು ಬಹುಚೆಂದ ಕಾಣುತಿದೆ
ಆಡಲು ಇಷ್ಟ ಬರುತಿದೆ
ಕಣ್ ಮುಂದೆ ಓಡಾಡುತಿದೆ
ನನ್ನ ಸಂಗಡವಿದು ಆಟ ನಡೆಸಿದೆ
ದೂರಾದರೆ ದೃಷ್ಟಿಗೆ ಸ್ಪಷ್ಟ ಆಗೂದಿಲ್ಲ
ಸಮಿಪಿಸಿದರೆ ಬಹು ಇಷ್ಟ ಬರುತಿದೆ
ಇದಕ್ಕ ನಂಗ ಸ್ಪರ್ಧೆ ಬಿದ್ದಿದೆ
ಹಿಡಿದರೆ ಬಡಿಯುವ ಅಂಜಿಕೆ
ಬಿಟ್ಟರೆ ಮತ್ತೊಮ್ಮೆ ಸಿಗದ ಬಯಕೆ
ಏನು ಜೋಕಾಲಿ ಇದೆಂತಹ ಜೋಕಾಲಿ
ಜೀಕುತಿದೆ ನೋಡು ಜೋಕಾಲಿ
ಬಾಗಿದ ಟೊಂಗೆಗೆ ಹತ್ತಿ

## ಎಂತಹ ಹಾವು

ಎಪ್ಪಾ ಎಂತಹ ಹಾವಿದು,
ನೋಡಿದರೆ ಕಾವೂರ ಬಾವೂರು
ಕಾಣುತಿದೆ ಕಡಿಯುತಿದೆನ್ನೊ ಹಾಗೆ
ಬುಸುಗುಟ್ಟುತಿದೊಂದೆ ಸವನೆ
ಎಲ್ಲರಿಗೂ ಹೆಂಜಿಸುತಿದೆ
ವಾಸ ಮಾಡುವದೊಂದೆ ಹುತ್ತಿನೊಳಗೆ
ತಿರುಗಾಡುತಿದೆ ಒಂಬತ್ತು ತೂತಿನೊಳಗೆ
ಬುಸ್‌ಂತ ಶಬ್ದ ಮಾಡುತಿದೆ
ಎಲ್ಲರಿಗೂ ಬಹು ಬೇಸರವಾಗಿದೆ
ಬಡಿದರೆ ಸಾಯುವಲ್ದಾಗಿದೆ
ಬಿಟ್ಟರೆ ಸುಮ್ಮನೆ ಕೂಡಲ್ದಾಗಿದೆ
ಇದರಿಂದ ಹುತ್ತಿಗೆ ಅವಮಾನ
ಯಾರು ನಂಬಲೊಲ್ಲರು ಹೋಗಲೊಲ್ಲರು
ಹುತ್ತು ಯಾಕಾಶ್ರಯ ಕೊಟ್ಟದೆ
ದಬ್ಬಬೇಕು ಮೊದಲಡಕೆನ್ನುವರು
ಹುತ್ತೇನ್ ಮಾಡ್ಬೇಕು ಪಾಪ.... !
ಇರುವೆ ರಚಿಸಿದ್ದರಿಂದ ಆಗಿದ್ದು
ಹಾವಿಗೆ ತಬ್ಬಿ ತಳ್ಳಿದ್ರ ದೊಡ್ಡವ
ಇಲ್ದೆ ಹೋದ್ರ ಚಿಕ್ಕವ
ಅಷ್ಟೆ ತಾನೆ.... !

# ಕೊನೆ

ಮಗು ಆಡುತಿದೆ
ಗಾಡಿ ಓಡುತಿದೆ
ಮರ ಅಲ್ಲಾಡುತಿದೆ
ಗಾಳಿ ಬೀಸುತಿದೆ
ತೊಟ್ಟಿಲು ತೂಗುತಿದೆ
ನೀರು ಹರಿಯುತಿದೆ
ಇವುಗಳಿಗೆ " ನಿಲ್ಲು " ಇದೆ ಅಲಾ ?
ಇದ್ದೆ ಇದೆ
ಅಂದ ಹಾಗೆ,
ಚಂಚಲಿಸುವ ಮನಸ್ಸಿಗೆ
ಹರಿಯುವ ಬಯಕೆಗೆ
ಆಶೆಯ ಗೋಪುರಕ್ಕೆ,
ಕೊನೆ ಇರಲೇಬೇಕಲ್ಲ ?
ಇದ್ದೆ ಇರುತ್ತೆ
ನಿನ್ನ ಪ್ರಯತ್ನದಲಿ,
" ಪ್ರಯತ್ನಾತ್ಮ ಪರಮೇಶ್ವರ "

## ನನಗಾಗಿ ಯಾರು ?

ಅಂದು ಕಂಡೆನೊಂದು ಗ್ರಾಮ
ಅದರಲಿದ್ದವು ಚಿಕ್ಕ ಪುಟ್ಟ ಮನೆಗಳು
ಮನೆಯೊಂದರಲ್ಲಿದ್ದರಿಬ್ಬರು ದಂಪತಿಗಳು
ಸಂತಸದಿ ಸಾಗಿಸುತಿದ್ದರು ತಮ್ಮ ಜೀವನವನು
ಹೀಗಿರಲು ಹುಟ್ಟಿತೊಂದು ಮಗು ದಂಪತಿಗಳಿಗೆ
ಮುದ್ದಾಗಿ ಬೆಳೆಯುತಿದ್ದನಾ ಗ್ರಾಮದಲಿ
ಮಗುವಿನ ಭವಿಷ್ಯಕ್ಕಾಗಿ ತಂದೆ ಬಿಟ್ಟು ಹೋದನು ಇನ್ನೊಂದು ಪಟ್ಟಣದಲಿ,
ಅಂದಿನಿಂದ ತನ್ನ ಕಥೆ ಪ್ರಾರಂಭಿಸಿದನ ಬಾಳ ಪುಟದಲಿ
ಕಂಡ ಘಟನೆಯೊಂದು ತುಂಡು ತುಂಡಾಗಿ ಮಾಡಿ
ರಸದೂಟವನುಣಿಸುವೆ ಹಿಂಡಿ ಅದರ ಕಥೆಯನು
ಕಥೆ ಎಂದಾಗ ರಾಮಾಯಣ ಮಹಾ ಭಾರತ ಅಲ್ಲ,
ನಿತ್ಯ ಜೀವನದಲ್ಲೊಂದಾಗುವ ಸತ್ಯ ಸಂಗತಿ ಮಾತ್ರ
ನನ್ನ ತಂದೆ ತಾಯಿ ಅಂದು ಬಿಟ್ಟು ಹೋದರು
ಚಂದದಿಂದ ಅಂದವಾಗಿ ಬೆಳೆದು ನಿಂದೆನು
ಜಗದ ಜೀವನದಲಿ ಕಾಲಿರಿಸಿದೆನು
ನನ್ನತನವ ಉಳಿಸಿ ಬೆಳೆಸಿಕೊಂಡೆನು
ಬಹಳ ಮುದ್ದು ಮಗನಾಗಿ ಎದ್ದು ತೋರಿದೆನು
ಸದ್ವಿನಯದ ಹೃದಯ ಪಡೆದು ಕೊಂಡೆನು
ತದ್ವಿರುದ್ಧವಾಗಿ ಲೌಕಿಕ ಹೋರಾಡಿದೆನು
ಸ್ನಿಗ್ಧ ಮೌನಗಳಿಂದ ಖಂಡಿತ ಆಗಿ ಬಿಟ್ಟೆನು
ಸಂದಿನ ಸಮಯ ಸಾಡಿಸಿ ಮಗು ಎಂದು ಬರುವದು
ಅಂದು ಕೊಂಡು ಮನದಲ್ಲಿ ನೊಂದು ಬಿಡುವರು

ಚಂದ್ರನಂತೆ ಅಂದವಾಗಿ ಮುಂದೆ ಹೋದೆಸು
ತಂದೆ ತಾಯಿ ಕಣ್ಣಿವೆ ಬಡಿಯದೆ ನೋಡಿದರು
" ........ ........ " ಎಂತಹ ಸಂತೋಷ
ಬೆಳಗಿತು ಮಗನ ಕೀರ್ತಿ ಅಪ್ಪರಲ್ಲಿ ಅಲ್ಲಲ್ಲಿ
ಸಹ ಲೀಲೆಯಿಂದ ಹುಟ್ಟಿ ಬಂದ ಶಿವನ ಮಗುವಾಗಿ
ಎಂದು ತಂದು ಕೊಂಡ ಭಾವ ಮನದಲಿ
ಅಪ್ಪರಲ್ಲಿ ಅರ್ಪಿಸಿ ಬಿಟ್ಟ ಸಮಾಜ ಸೇವೆಗಾಗಿ ( ಹೃತ್ಪೂರ್ವಕವಾಗಿ )
ಮಗು ಮುಂದೆ ಗುಣವ ಪಡೆದು
ನರ ಜನ್ಮವಿದು ತನ್ನದಲ್ಲವೆಂದು ತಿಳಿದು
ಅಂದೆ ತನ್ನ ತನವು ಗುರುವಿಗರ್ಪಿಸಿ
ತಂದೆ ನೀನು ತಾಯಿ ನೀನು ಎಂದುಸಿರಿ
ಮುಂದೆ ಮೂರು ಹೆಜ್ಜೆ ಇಟ್ಟ ಸಮಾಜದಲ್ಲಿ
ಗುರು ಕಂದವೆಂದು ಮನ್ನಿಸಿ ಕರೆದರು ಜನ ಮುಂದೆ
ವಂದಿಸುತ ಕಂದ ನಡೆದ ಮಠ ಮಂದಿರ ಗುಡಿ
ಅನುಭವದಲಿ ನಿಂತು ಬೋಧೆ ಮಾಡಿ ಬಂದ ಗುರು ಕೃಪೆಯಿಂದ
ಇಂತು ಕಾಲ ಕಳೆಯುತ ಮುಂದೆ ನಡೆದ
ಕಂತು ಹರನ ಚಿಂತೆಯಲ್ಲಿ ಭ್ರಾಂತನಾದೆ
ಹಂತ ಹಂತವಾಗಿ ಶಿವನ ಧ್ಯಾನ ಮಾಡಿದೆ
ಮುಂದೆ ತುಂಬು ಯೌವನ ಪ್ರಾಯನಾದೆ ( ಹೀಗಿರಲು)
ದಿನಕೊಮ್ಮೆದು ಸಮಯದಲ್ಲಿ
ಪುದ್ದಾ ಮುಖವ ನೋಡಿ ಮಾರು ಹೋದೆ,
ಗುರು ಕೊಟ್ಟ ಬುದ್ಧಿ ಅಲ್ಲಿ ಮರೆಯಾಯಿತು
ಆಕೆಯ ಮೇಲೆ ಪ್ರೇಮ ತೆರೆ ಹರಿಯಿತು

ಹುಂಬುತನವ ತಂದಿತು ಮನದಾಗ
ಎಂಬತ್ನಾಲ್ಕು ಲಕ್ಷ ತಿರುಗುವ ಯೋನಿಯೊಳಗ
ಮತ್ತೆ ಅಪೇಕ್ಷಿಸಿತು ಜೀವ ಪೂರ್ವಾಶ್ರಮದಾಗ
ತುಪ್ಪಾಗಿ ಹಾಲಾಗುವದಿಲ್ಲ ವೆಂದಾಗ, ಬಂದಿತು.
ಇಂತು ತತ್ವ ಘರ್ಷಣೆ ಮನದಲಿ ನಡೆದ್ದಾಗ
ಮುಂದೆ ಮಾಡುವದೇನು ?
ನೊಂದು ಕೊಂಡೆ ಬಹು ಬೆಂದೆ ಬೆಂದೆಯಾಗಿ
ಇಂದು ಗುರುವಚನ ದ್ರೋಹ ಆಗುವದೆಂದು ( ಹೊಳೆದಾಗ )
ಗುರು ನೋಡಲಿ ಮುದ್ದು ಮುಖದೊಡನೆ ಆಡಲಿ
ಎಂದು ಗಡಿಬಿಡಿ ಒಡಲೋಳು ನಡೆದಾಗ
ಒಡೆಯ ಮಹಾಗುರುವಿನ ಮರೆತೆನು ಆಗ
ನುಡಿದು ಮನ ನೋಯಿಸಿ ಕಡೆಗಾದೆನೀಗ ( ಗುರುವಿನಿಂದ )
ಒಡೆಯನಿಗಿಂತ ತೊಡೆಯಮೇಲಾಡುವ ಸತಿಯೇ ಶ್ರೇಷ್ಠ
ಇದುವೆನ್ನಿಷ್ಟ ಬಂದಿತು ಮನದಲಿ ಈ ಭಾವ
ಆಗ ಎಂತಹ ಆನಂದದ ನೋವ
ಹೇಳಬಾರದು ಯಾರಿಗೆ ಅನ್ನುತಿದೆ ಜೀವ ( ಇಷ್ಟಾಗಲು )
ಮುಂದೆ ಮುಖವು ಮುದ್ದು ಕೊಡಲು
ತನ್ನಿಷ್ಟದಂತೆ ನಿದ್ರೆಯು ಸುಖವಾಗಿರಲು
ಕಷ್ಟವಿಲ್ಲ ಇದರಲ್ಲಿ ಯಾವ ವಿಷಯವು
ಶ್ರೇಷ್ಠವೆನಿಸಿತು ಅಂದಿನ ಮಿಲನ ಸೌಖ್ಯವು
ಆನಂದವೇ ಆನಂದ, ಸಂತಸವೇ ಸಂತಸ,
ಮುಂದೆ ಯಾವ ಕುಂದು ಕೊರತೆ ಸಂಸಾರಕೆ ತಗಲದೆ
ಅಂದಣದಲಿ ಮೆರೆವ ಸುಖವೆನಿಸಲು

ಹಿಂದೆ ಕೆಲವು ದಿನದ ಕೃತಿ ನೆನಪು ಹಾರಲು
ಒಂದಾಯಿತು ಇಬ್ಬರ ಜೀವ ಭಾವ ದೃಷ್ಠಿಯಲಿ ( ಕಾಲ ಕಳೆಯಲು )
ಇಂತು ಸೌಖ್ಯವಾದ ನೌಕರಿ ಕೆಲಸ ನಡೆಯಲು
ಕೊರತೆ ಇರದಂತೆ ಇಬ್ಬರ ಜೀವ ಸಾಗಲು
ನಕ್ಕು ನಲಿದು ಒಬ್ಬರನೊಬ್ಬರಪ್ಪುವಲಿ
ಹಕ್ಕು ಪಡೆದು ಹುಟ್ಟಿತಾಗ ಮುದ್ದು ಮಗು ಚಿಕ್ಕದಾಗಿ
ಥಕ್ಕ ಥಕ್ಕ ಕುಣಿದು ಮಗುವು ಆಡುತಿರಲು
ಸಕಲ ಸುಖ ಸೌಭಾಗ್ಯದಲಿ ಮುಳುಗುತಿರಲು
ಬಿದಿಗೆ ಚಂದ್ರನಂತೆ ಬೆಳೆದು ಬರಲು
ಆಗ ಮಗುವಿಗಾರು ಪ್ರಾಯ ತುಂಬುತಿರಲು ( ಸುಖದಲಿ ಸಾಗಲು )
ಅಂದು ಮಗುವು ಆಟವಾಡಲು ಹೋಯಿತು.
ಮಕ್ಕಳಲಿ ಪುಟ್ಟ ಮಗು ಶ್ರೇಷ್ಠ ವೆನಿಸಿತು
ಶಾಲೆ ಚಿಕ್ಕ ಆಟ ಪಾಠಗಳಲಿ ಮೊದಲ ಸ್ಥಾನ ಪಡೆಯಿತು
ಮಗುವಿನ ಬೆಳವಣಿಗೆ ತಂದೆ ತಾಯಿಗೆ ಮೆಚ್ಚುಗೆ ಎನಿಸಿತು
ಹೀಗೆ ದಿನಗಳುರುಳಲು ಕಾಲ ಕಳೆಯಲು
ಸಮಯೊಂದರಂದು ಜ್ವರ ಭಾದೆ ಬಂದಟುಕಲು
ಕಟುಕನ ಕೈಗೆ ಸಿಕ್ಕ ಪ್ರಾಣಿಯಂತೆ ಒದ್ದಾಡಲು
ತಂದೆ ತಾಯಿಗಳಿಗೆ ದುಃಖವಾಗುತ್ತಿತ್ತು ನೋಡುತ್ತಿರಲು
ಮಗು ಮುಂದೆ ಕಾಲು ಬಡಿದು ಒದ್ದಾಡಲು
ಒಲವು ಶಿವನ ಇಚ್ಛೆಯಾಗಿ ನಲಿವ ಮಗು ಒಯ್ಯಲು
ಇಲ್ಲಿ ಸತ್ತಿರುವ ಮಗುವಿನ ಗೋಳು ಯಾರು ನೋಡಲು
ಸತ್ತ ಮಗನಿಗಾಗಿ ಹೊಡೇ ಬಡಿದು ಕೊಳ್ಳುತಿರಲು
ಮಗನ ಸಾವಿನ ಸ್ಮರಣೆಯಲಿ ತಂದೆ ತಾಯಿ ಬೆಂದು ಹೋದರು

ಚಿಂತೆ ಹೀಗೆ ಹೆಚ್ಚುತಿರಲು ತಾಯಿ ಕ್ಷೀಣಿಸುತಿರಲು
ಮುಂದೆ ಕಾಲಾಂತರದಲಿ ತಾಯಿ ಸಾವಪ್ಪುತಿರಲು ( ಮಗನಿಗಾಗಿ )
ತನ್ನ ಸತಿಯು ಸಾವು ಇರುಳ ಕಂಡ ಕನಸಾಯಿತು
ಸಾವು ಸತ್ಯ ಮಿಥ್ಯವೆಂದು ತಿಳಿಯದಾಯಿತು
ಮತ್ತೆ ಹೆಚ್ಚಿನ ಹುಚ್ಚು ಹಿಡಿದು ಪೆಚ್ಚಾದ,
ಇಚ್ಛೆವುಳ್ಳ ಸತಿ ಕಳೆದುಕೊಂಡ ಮನ ಸುಚ್ಚು ನೂರಾಯಿತು,
ಕೊನೆಗೊಮ್ಮೆ ಎಚ್ಚತ್ತು ಕಣ್ಣು ಬಿಚ್ಚಿ ನೋಡಿದ
ಕನಸಲ್ಲವಿದು ಸತ್ಯ ಸಂಗತಿ ಎಂದು ತಿಳಿದು
ಮನಸ್ಸಿಗೆ ಒತ್ತಿ ಭಾವ ವ್ಯಕ್ತ ಪಡಿಸಿದ
ಎಲ್ಲ ಮಿಥ್ಯ ಅದೂ ಒಂದೆ ಸತ್ಯವೆಂದರಿವಾಗಲು
ಮೊದಲು ನಾನು ಮೂಢನಾಗಿ ಮೋಹಕ್ಕೆ ಮೊರೆ ಹೊಕ್ಕೆನು
ಮಹಾಗುರು ಮಹಾಂತನ ಮರೆತೆನು ಅದಕ್ಕೆ
ಸಂಸಾರ ಸುಖದ ಸುಪ್ಪತ್ತಿಗೆಯಲಿ ಸಾಗುವದಕ್ಕೆ
ಅದು ಮುಳ್ಳಿನ ಹಾಸುಗೆ ಆಗಿ ಪರಿಣಮಿಸುವದಕ್ಕೆ
ಮಾಡುವದೇನು ?
ಈಗ ನನಗಾಗಿ ಯಾರು ?
ಸತಿ ಸುತರನ್ನು ಮಹಾ ಗುರುವನ್ನು ಮರೆಮಾಡಿಕೊಂಡು,
ಇಲ್ಲಿ ಜೀವಿಸುವವರೆಗೆಯಾದರು ಯಾರು ?



ಅಂದವಾದ

ಮುದ್ರಣಕ್ಕೆ

ಇಂದೇ ಸಂದರ್ಶಿಸಿರಿ,

## ಶ್ರೀ ವಿರೂಪಾಕ್ಷೇಶ್ವರ ಮುದ್ರಣಾಲಯ

**ಆಳಂದ - ೫೮೫ ೩೦೨**

ಜಿ. ಗುಲಬರ್ಗಾ (ಕರ್ನಾಟಕ)



ನಮ್ಮಲ್ಲಿ ಕನ್ನಡ,

ಹಿಂದಿ, ಇಂಗ್ಲಿಷ,

ಮರಾಠಿ ಭಾಷೆಗಳಲ್ಲಿ

ಮುದ್ರಿಸುತ್ತೇವೆ.



# ಅರಳದ ಹೂವುಗಳು

ಕು || ಶಿವರಾಯ ಮಹಾಂತಪೂರವರು ಪ್ರಥಮವಾಗಿ ತಮ್ಮ ಕವನ ಸಂಕಲನವನ್ನು ನಮ್ಮ ನಾಡಿನ ಜನತೆಯ ಕೈಗೆ ಕೊಡುತ್ತಿರುವದಲ್ಲದೆ, ಎರಡನೆಯದಾಗಿ ಇನ್ನು ಕೆಲವೆ ದಿನಗಳಲ್ಲಿ "ಅರಳದ ಹೂವುಗಳು" ಎಂಬ ಸಾಮಾಜಿಕ ಕಾದಂಬರಿಯೊಂದನ್ನು ಅರ್ಪಿಸಲು ಸಿದ್ಧರಾಗಿದ್ದಾರೆ. ಕೆಲವೇ ದಿನ ಪರಿಶ್ರಮಪಟ್ಟು ಅದಕ್ಕೆ ಬೇಕಾಗುವ ಎಲ್ಲ ಅನುಕೂಲತೆಗಳನ್ನು ಪಡೆದು ತಮ್ಮ ಮೊದಲನೆ ಪುಷ್ಪ "ಮೊದಲ ಹೆಜ್ಜೆ" ಎಂಬ ಕವನ ಸಂಕಲನವನ್ನು ಅರ್ಪಿಸುತ್ತಿರುವದು ನೋಡಿದಾಗ ಹಿಡಿಸದ ಸಂತೋಷವಾಗುತ್ತದೆ.

ಇವರೊಬ್ಬರು ಉತ್ತಮ ಭಾಷಣಕಾರರು ಅಲ್ಲದೆ ಧಾರ್ಮಿಕಜೀವನದ ಮೂರ್ತಿಗಳು. ಅಧ್ಯಾತ್ಮಿಕ ವಿಷಯ ಪ್ರತಿಪಾದನ ಮಾಡುವಲ್ಲಿ ಎಷ್ಟೋ ಎತ್ತಿದಕೈ ಇವರದು. ಇವರು ಹಳ್ಳಿಗಳಿಗೆ ಹೋಗಿ ಧಾರ್ಮಿಕ ವಿಷಯವನ್ನು ತಮ್ಮ ಭಾಷಣ ಕಲೆಯಿಂದ ಹೇಳುವಾಗ ನಿಜವಾಗಿ ಎಲ್ಲರೂ ಮೈ ಮರೆತು ಕೇಳುತ್ತಾರೆ ಇವರ ಮುಗ್ಧ ಸ್ವಭಾವದ ವರ್ತನೆ ಹಾಗೂ ಉತ್ತಮ ವಿಚಾರ ಸರಣಿಯ ಭಾಷಣಮೆಚ್ಚಿದ ನಮ್ಮ ಜನತೆ ತಮ್ಮ ಸಹಾಯ ಸಹಾನುಭೂತಿಯನ್ನು ತೋರಿಸಿ ಅವರ ಪ್ರಥಮ ಪುಷ್ಪ ಹೊರತರಲು ನೆರವಾಗಿದ್ದಾರೆ. ಇದು ಇವರ ಮೇಲೆ ಜನತೆ ಇಟ್ಟ ವಿಶ್ವಾಸವನ್ನು ವ್ಯಕ್ತಪಡಿಸುತ್ತದೆ.

ವಿದ್ಯಾರ್ಥಿಗಳಿಗಾಗಿ, ವಿದ್ಯಾರ್ಥಿ – ವಿದ್ಯಾರ್ಥಿನಿಯರ ಜೀವನ ತೆಗೆದುಕೊಂಡು, ಸಿರಿತನ-ಬಡತನ, ಹಳ್ಳಿಯಿಂದ ಪಟ್ಟಣ, ಮಹಾವಿದ್ಯಾಲಯದಜೀವನ ಅಲ್ಲಿ ಸಾಮಾನ್ಯವಾಗಿ ನಡೆಯುತ್ತಿರುವ ಪ್ರೇಮಭಾವನೆ, ಅದರಿಂದ ಅವರ ಜೀವನ ಹೇಗೆ ಆಗುತ್ತದೆ ಎನ್ನುವದನ್ನು ಸ್ವಾರಸ್ಯವಾಗಿ ತಿಳಿಸಿದ ಕಾದಂಬರಿ ಅರಳದಹೂವು ಇದನ್ನು ಬರೆದ ಮಹಾಂತಪೂರವರು ಕೂಡಾ ಒಬ್ಬ ವಿದ್ಯಾರ್ಥಿಗಳು. ಇವರ ದ್ವಿತಿಯ ಪುಷ್ಪ ಬೇಗ ಹೊರಬರಲೆಂದು ನಾವೆಲ್ಲ ಆಸಿಸೋಣ.

ಬಾ. ಶಿವಶರಣೆ,

ಕು || ಮೀನಾಕ್ಷಿ ಮಹಾಂತಪೂರ.